KA / BG-GPO / 2515 / WPP-47 / 2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೧ | ಬೆಂಗಳೂರು, ಗುರುವಾರ, ಮಾರ್ಚ್ ೨೩, ೨೦೦೬ (ಚೈತ್ರ ೦೨, ಶಕ ವರ್ಷ ೧೯೨೭) | ಸಂಚಿಕೆ ೧೨

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಮೆ :: ಎಸ್.ಎಲ್.ವಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಗಂಡಿಬಾಗಿಲು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಇಂಇ 23 ಎನ್‌ಸಿಇ 2004 ದಿನಾಂಕ : 10.03.2004.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಗಂಡಿಬಾಗಿಲು/2005/2420 ದಿನಾಂಕ : 24/28.12.2005.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ :: ಎಸ್.ಎಲ್.ವಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿಬಾಗಿಲು ಬಳಿ ಅಣಿಯೂರು ಹೊಳೆಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಯೋಜನೆಯ ಕಾಲಾವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 09 ಎನ್‌ಸಿಇ 2006, ಬೆಂಗಳೂರು, ದಿನಾಂಕ: 01ನೇ ಫೆಬ್ರವರಿ 2006**

ಮೆ :: ಎಸ್.ಎಲ್.ವಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿಬಾಗಿಲು ಬಳಿ ಅಣಿಯೂರು ಹೊಳೆಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶವನ್ನು ಮುಂದೆ ವಿಸ್ತರಿಸಲು ಅವಕಾಶವಿಲ್ಲ ಎಂಬ ಷರತ್ತಿನೊಂದಿಗೆ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 232

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** 4 ಮೆಗಾ ವ್ಯಾಟ್ ಸಾಮರ್ಥ್ಯದ ಸುರಲಬಿ ಕಿರು ಜಲ ವಿದ್ಯುತ್ ಯೋಜನೆಯನ್ನು M/s Core Green Sugar and Fuels Private Limited ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವುದನ್ನು M/s Core Green Hydro Power India Private Limited ಎಂಬ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಇಎನ್ 276 ಎನ್‌ಸಿಇ 2005 ದಿನಾಂಕ : 14.10.2005.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಸುರಲಬಿ/2005/167 ದಿನಾಂಕ : 16.1.2006.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ M/s Core Green Sugar and Fuels Private Limited ಕಂಪನಿಗೆ ಕೊಡಗು ಜಿಲ್ಲೆಯ ಸೋಮವಾರ ಪೇಟೆ ತಾಲ್ಲೂಕಿನ ಸುರಲಬಿ ಬಳಿ ಮಾದಾಪುರ ಹೊಳೆಯ ಉಪ ನದಿಯಾದ ಸುರಲಬಿ ಹೊಳೆಗೆ ಅಡ್ಡಲಾಗಿ 4 ಮೆಗಾ ವ್ಯಾಟ್ ಸಾಮರ್ಥ್ಯದ ಸುರಲಬಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಹಣಕಾಸು ಮೂಲಗಳಿಂದ ಧನ ಸಹಾಯ ಪಡೆಯಲು ಸಹಕಾರವಾಗುವುದರಿಂದ ಸದರಿ ಯೋಜನೆಯನ್ನು ಮೇಲಿನ ಕಂಪನಿಯ ನಿರ್ದೇಶಕರುಗಳೇ ಇರುವ M/s Core Green Hydro Power India Private Limited ಎಂಬ ಕಂಪನಿ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 276 ಎನ್‌ಸಿಇ 2005, ಬೆಂಗಳೂರು, ದಿನಾಂಕ: 02ನೇ ಫೆಬ್ರವರಿ 2006**

M/s Core Green Hydro Power India Private Limited ಕಂಪನಿಗೆ ಕೊಡಗು ಜಿಲ್ಲೆಯ ಸೋಮವಾರ ಪೇಟೆ ತಾಲ್ಲೂಕಿನ ಸುರಲಬಿ ಬಳಿ ಮಾದಾಪುರ ಹೊಳೆಯ ಉಪ ನದಿಯಾದ ಸುರಲಬಿ ಹೊಳೆಗೆ ಅಡ್ಡಲಾಗಿ 4 ಮೆಗಾ ವ್ಯಾಟ್ ಸಾಮರ್ಥ್ಯದ ಸುರಲಬಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 229

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ :: ಶಿವನ ಸಮುದ್ರಮ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗಗನ ಚುಕ್ಕಿ ಎಡದಂಡೆ ಕಾಲುವೆ ಮತ್ತು ಗಗನ ಚುಕ್ಕಿ ಬಲ ದಂಡೆ ಕಾಲುವೆ ಎರಡು ಕಿರು ಜಲ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ : ಇಂಇ 70 ಎನ್‌ಸಿಇ 2002 ದಿನಾಂಕ : 11.7.2002.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ. / 06 / ಗಗನಚುಕ್ಕಿ–2–ಗಗನಚುಕ್ಕಿ–1 / 2005 / 87 ಮತ್ತು 86 ದಿನಾಂಕ : 07 / 12.01.2006.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ :: ಶಿವನ ಸಮುದ್ರಮ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜ ನಗರ ಜಿಲ್ಲೆಯ, ಕೊಳ್ಳೆಗಾಲ ತಾಲ್ಲೂಕಿನ ಶಿವನ ಸಮುದ್ರಂ ಜಲಪಾತದ ಹತ್ತಿರ ಗಗನಚುಕ್ಕಿ ಎಡದಂಡೆ ಕಾಲುವೆ (ಚಿಕ್ಕಮುತ್ತುರಾಯ ದೇವಸ್ಥಾನದ ಬಳಿ) ಮತ್ತು ಗಗನಚುಕ್ಕಿ ಬಲದಂಡೆ ಕಾಲುವೆ ದುರ್ಗದ ಹಿಂದೆ (ಶಿವನ ಸಮುದ್ರ ಜಲಪಾತ) ತಲಾ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಳನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಯೋಜನೆಗಳ ಕಾಲಾವಕಾಶವನ್ನು ಮುಂದಿನ 36 ತಿಂಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 26 ಎನ್‌ಸಿಇ 2006, ಬೆಂಗಳೂರು, ದಿನಾಂಕ: 27ನೇ ಜನವರಿ 2006**

ಮೆ :: ಶಿವನ ಸಮುದ್ರಮ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜ ನಗರ ಜಿಲ್ಲೆಯ, ಕೊಳ್ಳೆಗಾಲ ತಾಲ್ಲೂಕಿನ ಶಿವನ ಸಮುದ್ರಂ ಜಲಪಾತದ ಹತ್ತಿರ ಗಗನಚುಕ್ಕಿ ಎಡದಂಡೆ ಕಾಲುವೆ (ಚಿಕ್ಕಮುತ್ತುರಾಯ ದೇವಸ್ಥಾನದ ಬಳಿ) ಮತ್ತು ಗಗನಚುಕ್ಕಿ ಬಲದಂಡೆ ಕಾಲುವೆ ದುರ್ಗದ ಹಿಂದೆ (ಶಿವನ ಸಮುದ್ರ ಜಲಪಾತ) ತಲಾ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಳ ಕಾಲಾವಕಾಶವನ್ನು ಮುಂದೆ ವಿಸ್ತರಿಸಲು ಅವಕಾಶವಿಲ್ಲ ಎಂಬ ಷರತ್ತಿನೊಂದಿಗೆ ಮುಂದಿನ 36 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 198

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ :: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಎರಡು ಕಿರು ಜಲ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ : ಇಂಇ 131 ಎನ್‌ಸಿಇ 2001 ದಿನಾಂಕ : 8.10.2001.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ / 06 / ಮರದೂರು / 2005 / 75 ದಿನಾಂಕ: 7 / 10.01.2006 ಮತ್ತು ಕೆಆರ್‌ಇಡಿ/ 06 / ಕಟ್ಟೆಮರಲವಾಡಿ / 2005 / 76 ದಿನಾಂಕ : 07/10.01.2005.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ :: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ, ಹುಣಸೂರು ತಾಲ್ಲೂಕಿನ ಕಟ್ಟೆಮರಲವಾಡಿ ಮತ್ತು ಮರದೂರು ಗ್ರಾಮದ ಬಳಿ ತಲಾ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಳನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಯೋಜನೆಗಳ ಕಾಲಾವಕಾಶವನ್ನು ಮುಂದಿನ 36 ತಿಂಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 29 ಎನ್‌ಸಿಇ 2006, ಬೆಂಗಳೂರು, ದಿನಾಂಕ: 27ನೇ ಜನವರಿ 2006**

ಮೆ :: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ, ಹುಣಸೂರು ತಾಲ್ಲೂಕಿನ ಕಟ್ಟೆಮರಲವಾಡಿ ಮತ್ತು ಮರದೂರು ಗ್ರಾಮದ ಬಳಿ ತಲಾ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಳ ಕಾಲಾವಕಾಶವನ್ನು ಮುಂದೆ ವಿಸ್ತರಿಸಲು ಅವಕಾಶವಿಲ್ಲ ಎಂಬ ಷರತ್ತಿನೊಂದಿಗೆ ಮುಂದಿನ 36 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 199

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ :: ಇಂದ್ರ ಧನುಶ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಇಂಇ 71 ಎನ್‌ಸಿಇ 2002 ದಿನಾಂಕ : 15.07.2002.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಧನಗೆರೆ/2005/89 ದಿನಾಂಕ : 07/12.01.2006.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ :: ಇಂದ್ರ ಧನುಶ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ, ಕೊಳ್ಳೆಗಾಲ ತಾಲ್ಲೂಕಿನ ಧನಗೆರೆ ಗ್ರಾಮದ ಬಳಿ ಧನಗೆರೆ ಬಲದಂಡೆ ಕಾಲುವೆಯಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಯೋಜನೆಯ ಕಾಲಾವಕಾಶವನ್ನು ಮುಂದಿನ 36 ತಿಂಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಎನ್‌ಸಿಇ 2006, ಬೆಂಗಳೂರು, ದಿನಾಂಕ: 27ನೇ ಜನವರಿ 2006**

ಮೆ :: ಇಂದ್ರ ಧನುಶ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ, ಕೊಳ್ಳೆಗಾಲ ತಾಲ್ಲೂಕಿನ ಧನಗೆರೆ ಗ್ರಾಮದ ಬಳಿ ಧನಗೆರೆ ಬಲದಂಡೆ ಕಾಲುವೆಯಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶವನ್ನು ಮುಂದೆ ವಿಸ್ತರಿಸಲು ಅವಕಾಶವಿಲ್ಲ ಎಂಬ ಷರತ್ತಿನೊಂದಿಗೆ ಮುಂದಿನ 36 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 197

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರಿನ ಮುಗಾಂಬಿಗೈ ಚಾರಿಟೆಬಲ್ ಅಂಡ್ ಎಜುಕೇಷನಲ್ ಟ್ರಸ್ಟ್‌ನ ರಾಜರಾಜೇಶ್ವರಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರು ಇದನ್ನು ತಮಿಳು ಭಾಷಾ ಅಲ್ಪಸಂಖ್ಯಾತ ಕಾಲೇಜು ಎಂದು ಪರಿಗಣನೆ.

**ಓದಲಾಗಿದೆ:** 1) ದಿನಾಂಕ 31-10-2002 ಸಂಖ್ಯೆ: ಆಕುಕ 218 ಎಂಎಂಇ 2002ರ ಸರ್ಕಾರಿ ಆದೇಶ.

2) ದಿನಾಂಕ 19-09-2005ರ ಅಲ್ಪಸಂಖ್ಯಾತ ಸಮಿತಿ ಸಭೆಯ ನಡವಳಿಗಳು.

3) ದಿನಾಂಕ 28-09-2005ರ ರಾಜರಾಜೇಶ್ವರಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರು ಇದರ ಅಧ್ಯಕ್ಷರ ಪತ್ರ.

**ಪ್ರಸ್ತಾವನೆ :**

1) ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಮುಗಾಂಬಿಗೈ ಚಾರಿಟೆಬಲ್ ಅಂಡ್ ಎಜುಕೇಷನಲ್ ಟ್ರಸ್ಟ್‌ನ ರಾಜರಾಜೇಶ್ವರಿ ದಂತ ಕಾಲೇಜು ಮತ್ತು ಆಸ್ಪತ್ರೆಗೆ ಕೆಲವು ಷರತ್ತು ಮತ್ತು ನಿಬಂಧನೆಗಳನ್ನು ಕಟ್ಟುನಿಟ್ಟಾಗಿ ಪೂರೈಸುವುದಕ್ಕೆ ಕಾಲೇಜನ್ನು ಭದ್ರಗೊಳಿಸಿ ತಮಿಳು ಭಾಷಾ ಅಲ್ಪಸಂಖ್ಯಾತ ಸ್ಥಾನಮಾನವನ್ನು ನೀಡಲಾಗಿದೆ.

2) ಮೇಲೆ (2)ರಲ್ಲಿ ಓದಲಾದ ನಡವಳಿಗಳಲ್ಲಿ ಸಮಿತಿಯು ಬೆಂಗಳೂರಿನ ಮುಗಾಂಬಿಗೈ ಚಾರಿಟೆಬಲ್ ಅಂಡ್ ಎಜುಕೇಷನಲ್ ಟ್ರಸ್ಟ್‌ನ ರಾಜರಾಜೇಶ್ವರಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರು ಇದಕ್ಕೆ ತಮಿಳು ಭಾಷಾ ಅಲ್ಪಸಂಖ್ಯಾತ ಸ್ಥಾನಮಾನವನ್ನು ನೀಡಲು ಶಿಫಾರಸ್ಸು ಮಾಡಿತ್ತು.

3) ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ರಾಜರಾಜೇಶ್ವರಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರು ಇದರ ಅಧ್ಯಕ್ಷರು ಸದರಿ ಕಾಲೇಜಿಗೆ 2005–06ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ತಮಿಳು ಭಾಷಾ ಅಲ್ಪಸಂಖ್ಯಾತ ಸ್ಥಾನಮಾನವನ್ನು ನೀಡಲು ಕೋರಿರುತ್ತಾರೆ.

4) ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಬೆಂಗಳೂರಿನ ಮುಗಾಂಬಿಗೈ ಚಾರಿಟೆಬಲ್ ಅಂಡ್ ಎಜುಕೇಷನಲ್ ಟ್ರಸ್ಟ್‌ನ ರಾಜರಾಜೇಶ್ವರಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರು ಇದಕ್ಕೆ ಕೆಲವು ಷರತ್ತು ಮತ್ತು ನಿಬಂಧನೆಗಳಿಗೆ ಒಳಪಡಿಸಿ ತಮಿಳು ಭಾಷಾ ಅಲ್ಪಸಂಖ್ಯಾತ ಸ್ಥಾನಮಾನವನ್ನು ನೀಡುವುದಕ್ಕೆ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 302 ಎಂಪಿಎಸ್ 2005, ಬೆಂಗಳೂರು, ದಿನಾಂಕ: 08ನೇ ಫೆಬ್ರವರಿ 2006**

5) ಬೆಂಗಳೂರಿನ ಮುಗಾಂಬಿಗೈ ಚಾರಿಟೆಬಲ್ ಅಂಡ್ ಎಜುಕೇಷನಲ್ ಟ್ರಸ್ಟ್‌ನ ರಾಜರಾಜೇಶ್ವರಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರು ಇದಕ್ಕೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳನ್ನು ಕಟ್ಟುನಿಟ್ಟಾಗಿ ಪೂರೈಸುವುದಕ್ಕೆ ಕಾಲೇಜನ್ನು ಭದ್ರಗೊಳಿಸಿ, 2005–06ನೇ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ ತಮಿಳು ಭಾಷಾ ಅಲ್ಪಸಂಖ್ಯಾತ ಸ್ಥಾನಮಾನವನ್ನು ನೀಡಲಾಗಿದೆ.

(1) ಅಲ್ಪಸಂಖ್ಯಾತರೆಂದು ಪರಿಗಣಿಸುವ ಬಗ್ಗೆ ರಾಜ್ಯವನ್ನು ಒಂದು ಘಟಕವಾಗಿ ಪರಿಗಣಿಸುವುದು.

(2) ಕರ್ನಾಟಕದಲ್ಲಿ ವಾಸಿಸುತ್ತಿರುವ ತಮಿಳು ಭಾಷಾ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಆಡಳಿತ ಮಂಡಳಿಯು ಅಲ್ಪಸಂಖ್ಯಾತ ಸೀಟುಗಳನ್ನು ಭರ್ತಿ ಮಾಡತಕ್ಕದ್ದು, ಅಂತಹ ಅಭ್ಯರ್ಥಿಗಳು 1ನೇ ತರಗತಿಯಿಂದ ಅರ್ಹತಾದಾಯಕ ಪರೀಕ್ಷೆಯನ್ನು ಕರ್ನಾಟಕದಲ್ಲಿರುವ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿ ಎಸ್.ಎಸ್.ಎಲ್.ಸಿ/ಹತ್ತನೇ ತರಗತಿಯನ್ನು ಅಥವಾ ದ್ವಿತೀಯ ಪಿ.ಯು.ಸಿ/12ನೇ ತರಗತಿಯ ಪರೀಕ್ಷೆಯನ್ನು ಕರ್ನಾಟಕ ರಾಜ್ಯದಿಂದ ತೇರ್ಗಡೆಯಾಗಿರಬೇಕು.

(3) ಕರ್ನಾಟಕದಲ್ಲಿ ವಾಸಿಸುತ್ತಿರುವ ತಮೀಳು ಭಾಷಾ ಅಲ್ಪಸಂಖ್ಯಾತರಿಗೆ ಸೀಟುಗಳು ಲಭ್ಯವಿದೆ ಎಂದು ಸ್ಪಷ್ಟಪಡಿಸಿ ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟಣೆ ನೀಡತಕ್ಕದ್ದು.

(4) ಕರ್ನಾಟಕದಿಂದ ಸಾಕಷ್ಟು ವಿದ್ಯಾರ್ಥಿಗಳು ದೊರೆಯದಿದ್ದ ಪಕ್ಷದಲ್ಲಿ ಸದರಿ ಸೀಟುಗಳನ್ನು ತಮಿಳು ಭಾಷಿಕರು ಅಧಿಕ ಸಂಖ್ಯೆಯಲ್ಲಿರುವ ತಮಿಳುನಾಡಿನ ಅಭ್ಯರ್ಥಿಗಳನ್ನು ಹೊರತುಪಡಿಸಿ ಇತರೆ ರಾಜ್ಯಗಳ ತಮಿಳು ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಪ್ರವೇಶ ನೀಡತಕ್ಕದ್ದು.

(5) ಒಂದು ವೇಳೆ ತಮಿಳು ಅಲ್ಪಸಂಖ್ಯಾತ ವರ್ಗಕ್ಕೆ ಮೀಸಲಾದ ಸೀಟುಗಳು ಭರ್ತಿಯಾಗದೇ ಉಳಿದಲ್ಲಿ ಅದನ್ನು ಸಂಸ್ಥೆಯು ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕಕ್ಕೆ casual round ಪ್ರಾರಂಭವಾಗುವ 7 ದಿನಗಳ ಮುಂಚೆಯೇ ವಿಶೇಷಾಧಿಕಾರಿಗಳು, ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ, ಬೆಂಗಳೂರು ಇವರಿಗೆ ಹಿಂತಿರುಗಿಸಿ ರಾಜ್ಯ ಸರ್ಕಾರ ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶಕರುಗಳಿಗೆ ವರದಿ ಮಾಡತಕ್ಕದ್ದು.

(6) ಮೇಲ್ಕಂಡ ಷರತ್ತುಗಳನ್ನು ಪಾಲಿಸದಿದ್ದಲ್ಲಿ 2006–07ನೇ ಶೈಕ್ಷಣಿಕ ಸಾಲಿನ ಅಲ್ಪಸಂಖ್ಯಾತ ಸ್ಥಾನಮಾನವನ್ನು ಮುಂದುವರಿಸಲಾಗುವುದಿಲ್ಲ.

(7) 2006–07ನೇ ಶೈಕ್ಷಣಿಕ ಸಾಲಿಗೆ ಅಲ್ಪಸಂಖ್ಯಾತ ಸ್ಥಾನಮಾನವನ್ನು ಮುಂದುವರೆಸಬೇಕಾದಲ್ಲಿ ಸಂಸ್ಥೆಯು 2005–06ನೇ ಸಾಲಿನಲ್ಲಿ ಪ್ರವೇಶ ಮಾಡಿಕೊಳ್ಳಲಾದ ವಿದ್ಯಾರ್ಥಿಗಳ ಪಟ್ಟಿಯೊಂದಿಗೆ ಕೋರಿಕೆಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

6) ಮೇಲ್ಕಂಡ ಯಾವುದೇ ಷರತ್ತು ಮತ್ತು ನಿಬಂಧನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು, ಯಾವುದೇ ಸ್ವರೂಪದ ಉಲ್ಲಂಘನೆಯು ಅಲ್ಪಸಂಖ್ಯಾತ ಸ್ಥಾನಮಾನವನ್ನು ಹಿಂತೆಗೆದುಕೊಳ್ಳಲು ಸಕಾರಣವಾಗುತ್ತದೆ ಮತ್ತು ಮೇಲ್ಕಂಡ ಷರತ್ತು ಹಾಗೂ ನಿಬಂಧನೆಗಳನ್ನು ಯಥಾವತ್ತಾಗಿ ಪೂರೈಸಲಾಗಿದೆ ಎಂಬುದನ್ನು ಸರ್ಕಾರ, ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮತ್ತು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯವು ಕಾಲಕಾಲಕ್ಕೆ ಪರಾಮರ್ಶಿಸಿ ಖಚಿತಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 263

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೧೧೦ ಎಸ್ಇಎಸ್ ೦೧(೧) ದಿನಾಂಕ:೨೧.೦೫.೨೦೦೪.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೧೧೦ ಎಸ್ಇಎಸ್ ೦೧(೨) ದಿನಾಂಕ:೨೧.೦೫.೨೦೦೪.
3) ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ:೦೬.೧೧.೨೦೦೫

**ಪ್ರಸ್ತಾವನೆ :**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕಿನಲ್ಲಿ ಶ್ರೀ ಎಸ್.ಕೆ.ಲಕ್ಷ್ಮಣ್ ಮತ್ತು ಶ್ರೀ ನಾಗರಾಜ್ ಅವರುಗಳು ತಹಶೀಲ್ದಾರ್ ಹುದ್ದೆಯಲ್ಲಿ, ಶ್ರೀ ಜಿ.ನರಸಿಂಹಮೂರ್ತಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕರು ಅವರು ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ, ಶ್ರೀ ಗುರುಲಿಂಗಯ್ಯ, ಗ್ರಾಮ ಲೆಕ್ಕಿಗರು ಅವರು ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ, ಶ್ರೀ ಮಧು, ಶ್ರೀ ಶಬಿನ್ ತಾಜ್, ಶ್ರೀ ಮೈಕೇಲ್ ಬೆಂಜಮಿನ್, ದ್ವಿತೀಯ ದರ್ಜೆ ಸಹಾಯಕರುಗಳು ಅವರುಗಳು ದ್ವಿತೀಯ ದರ್ಜೆ ಸಹಾಯಕರುಗಳ ಹುದ್ದೆಯಲ್ಲಿ ೧೯೯೧-೯೬ನೇ ಸಾಲಿನ ಅವಧಿಯಲ್ಲಿ ರಾಮನಗರ ತಾಲ್ಲೂಕಿನಲ್ಲಿ ಕೆಲಸ ನಿರ್ವಹಿಸಿದ ಈ ಕೆಳಕಂಡ ಅಧಿಕಾರಿ/ನೌಕರರುಗಳು ಸರ್ಕಾರವು ನಿಗದಿ ಪಡಿಸಿದ ದಿನಾಂಕದ ನಂತರ ಅನಧಿಕೃತ ಸಾಗುವಳಿಯನ್ನು ಸಕ್ರಮ ಗೊಳಿಸಲು ಬಂದಿರುವ ಅರ್ಜಿಗಳನ್ನು ಅನಧಿಕೃತವಾಗಿ ವಹಿಯಲ್ಲಿ ಸೇರ್ಪಡಿಸಿರುವ ಹಾಗೂ ಸಮಿತಿಯ ಮಂಜೂರಾತಿ ಇಲ್ಲದೆ ಕೆಲವು ಪ್ರಕರಣಗಳಲ್ಲಿ ಸಾಗುವಳಿ ಪತ್ರಗಳನ್ನು ವಿತರಿಸಿ ದುರ್ನಡತೆ ಎಸಗಿರುತ್ತಾರೆಂದು ಇದರಿಂದ KIADB ಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಅಕ್ರಮ/ಅನಾವಶ್ಯ ಪರಿಹಾರ ನೀಡುವ ಪ್ರಸಂಗ ಕಲ್ಪಿಸಿರುತ್ತಾರೆಂಬ ಆರೋಪಗಳ ಸಂಬಂಧ

ಮೇಲ್ಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ(೧) ಮತ್ತು (೨)ರಲ್ಲಿ ಓದಲಾದ ದಿನಾಂಕ:೨೧.೦೫.೦೪ ಸರ್ಕಾರಿ ಆದೇಶಗಳಲ್ಲಿ ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(೩) ರಲ್ಲಿ ಓದಲಾದ ವಿಚಾರಣಾ ವರದಿಯನ್ನು ದಿನಾಂಕ:೦೬.೧೧.೦೫ರಂದು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 2 ಎಸ್ಇಎನ್ 06, ಬೆಂಗಳೂರು, ದಿನಾಂಕ: 20ನೇ ಜನವರಿ 2006**

ಸರ್ಕಾರವು ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ ೩ ಸೇಇವಿ ೯೬, ದಿನಾಂಕ:೨೪-೪-೧೯೯೪ ರನ್ವಯ ರೂ.೫,೦೦೦/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ೪೫ ಸೇಇವಿ ೨೦೦೧, ದಿನಾಂಕ:೪-೩-೨೦೦೨ ರನ್ವಯ ರೂ.೧,೦೦೦/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "೨೦೫೨ ಸಚಿವಾಲಯ ಸಾಮಾನ್ಯ ಸೇವೆಗಳು-೦೯೦- ಸಚಿವಾಲಯ-೦೧, ಕರ್ನಾಟಕ ಸರ್ಕಾರದ ಸಚಿವಾಲಯ-೦೫೧ ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 175 **ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

**ವಿಷಯ:** ಶ್ರೀ ಎಂ.ಕೆ.ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ: ಸಿಆಸುಇ ೬೩ ಎಸ್ಇಎನ್ ೨೦೦೪ ದಿನಾಂಕ:೨೧.೦೨.೨೦೦೫.
2) ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರ ದಿನಾಂಕ:೦೫.೧೦.೦೫ರ ವಿಚಾರಣಾ ವರದಿ.
3) ೨ನೇ ಕಾರಣ ಕೇಳುವ ನೋಟೀಸ್ ದಿನಾಂಕ:೧೬.೧೦.೨೦೦೫.

**ಪ್ರಸ್ತಾವನೆ :**

ಶ್ರೀ ಎಂ.ಕೆ.ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿರವರು ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯಲ್ಲಿ ಸೇವೆಗಳು ವಿಭಾಗದ ಉಪ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಹಲವಾರು ಕಡತಗಳಲ್ಲಿ ಕ್ರಮ ಕೈಗೊಳ್ಳದೆ ಹಾಗೆಯೇ ತಮ್ಮ ಬಳಿ ಇಟ್ಟುಕೊಂಡು ಕರ್ತವ್ಯ ಲೋಪವೆಸಗಿ ಹಾಗೂ ಗಣಕ ಯಂತ್ರದಲ್ಲಿ ಕಡತದ ಚಲನೆ ಬಗ್ಗೆ ಅಸಂಬದ್ಧ ನಮೂದುಗಳನ್ನು ಮಾಡಿ ಬೇಜವಾಬ್ದಾರಿಯಿಂದ ವರ್ತಿಸಿರುವ ಆರೋಪದ ಸಂಬಂಧ ಈ ಕೆಳಕಂಡ ಆರೋಪಗಳನ್ನು ಹೊರಿಸಲಾಗಿರುತ್ತದೆ.

೧) ಇಲಾಖಾ ವಿಚಾರಣೆಗೆ ಸಂಬಂಧಿಸಿದ ಕಡತವೊಂದು ಕಂದಾಯ ಸಚಿವರಿಂದ ದಿ:೧೨.೦೬.೨೦೦೨ರಂದು ಪ್ರಧಾನ ಕಾರ್ಯದರ್ಶಿಯವರಿಗೆ ಬಂದಿದ್ದು, ಅದನ್ನು ದಯವಿಟ್ಟು ಚರ್ಚಿಸಿ ಎಂಬ ಷರಾದೊಂದಿಗೆ ಪ್ರಧಾನ ಕಾರ್ಯದರ್ಶಿಯವರು ಸೂಚನೆ ನೀಡಿದ್ದರೂ ಸಹ ಅದನ್ನು ದಿ:೧೪.೧೦.೨೦೦೩ರವರೆಗೆ ಅವರ ಬಳಿಯೇ ಇಟ್ಟುಕೊಂಡು ಕಡೆಗೂ ಚರ್ಚಿಸದೆ ಅದನ್ನು ಅಧೀನ ಕಾರ್ಯದರ್ಶಿಯವರಿಗೆ ಹಿಂತಿರುಗಿಸಿರುತ್ತಾರೆ.

೨) ಮೇಲ್ಕಂಡ ಕಡತವನ್ನು ದಿ:೨೮.೧೦.೨೦೦೨ರಂದು ಗಣಕಯಂತ್ರದಲ್ಲಿ ಕಂದಾಯ ಸಚಿವರಿಗೆ ಎಂದು ನಮೂದಿಸಿ ದುರ್ನಡತೆ ಎಸಗಿದ್ದಾರೆ.

೩) ಇವರು ಆಗಸ್ಟ್ ೨೦೦೩ರಲ್ಲಿ ವರ್ಗಾವಣೆಯಾದ ನಂತರವೂ ಅವರ ಉತ್ತರಾಧಿಕಾರಿಯವರಿಗೆ ೬೫ ಕಡತಗಳನ್ನು ೨ ತಿಂಗಳ ನಂತರ ಹಿಂತಿರುಗಿಸಿರುತ್ತಾರೆ.

೪) ೧೯ ಕಡತಗಳನ್ನು ಇವರಿಗೆ ಗಣಕ ಯಂತ್ರದಲ್ಲಿ ಟ್ರಾನ್ಸಿಟ್ ಎಂದು ತೋರಿಸಲಾಗಿದ್ದರೂ ಅದನ್ನು ಸ್ವೀಕರಿಸದೆ ನಿಯಮ ಬಾಹಿರವಾಗಿ ಅವರಲ್ಲಿಯೇ ಭೌತಿಕವಾಗಿ ಉಳಿಸಿಕೊಂಡಿರುತ್ತಾರೆ.

ಈ ಆರೋಪಗಳ ಸಂಬಂಧ ಅವರಿಗೆ ಜಾರಿ ಮಾಡಲಾದ ನೋಟೀಸಿಗೆ ಕಡೆಗೂ ಉತ್ತರಿಸದ ಹಿನ್ನೆಲೆಯಲ್ಲಿ ದೋಷಾರೋಪಣೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಮೇಲೆ(೧)ರಲ್ಲಿ ಓದಲಾದ ದಿ:೨೧.೦೨.೦೫ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಗಿತ್ತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(೨)ರಲ್ಲಿ ಓದಲಾದ ದಿ:೦೫.೧೦.೦೫ರ ವಿಚಾರಣಾ ವರದಿಯನ್ನು ಸಲ್ಲಿಸಿ, ಆಪಾದಿತರು ಕಡತಗಳನ್ನು ತಮ್ಮಲ್ಲಿಯೇ ಉಳಿಸಿಕೊಂಡು ಬೇರೆಯವರನ್ನು ದಾರಿ ತಪ್ಪಿಸಲು ತಪ್ಪು ಮಾಹಿತಿಯನ್ನು ಗಣಕಯಂತ್ರದಿಂದ ಪಟ್ಟಿ ಮಾಡಿಸಿ ರುಜುಮಾಡಿರುವುದು ತಿಳಿದು ಬರುತ್ತದೆ. ಆಪಾದಿತರು ೧೯ ಕಡತಗಳಿಗೆ ಸ್ವೀಕೃತಿ ತೋರಿಸದೇ ಅವುಗಳನ್ನು ತಮ್ಮಲ್ಲಿಯೇ ಇಟ್ಟುಕೊಂಡು ಅವುಗಳ ಬಗ್ಗೆ ಟ್ರಾನ್ಸಿಟ್ ಎಂದು ತೋರಿಸಿರುವುದು ಅವರು ಜವಾಬ್ದಾರಿಯುತ ಅಧಿಕಾರಿಯಾಗಿ ಮಾಡಿದ ತಪ್ಪಾಗಿರುತ್ತದೆ ಎಂದು ಪರಿಗಣಿಸಲಾಗಿದೆ. ಇದರಿಂದಾಗಿ ಆಪಾದಿತರ ಮೇಲೆ ಮಾಡಿರುವ ನಾಲ್ಕು ದೋಷಾರೋಪಣೆಗಳು ರುಜುವಾತಾಗಿವೆ ಎಂದು ನಿರ್ಣಯಿಸಿ ಆಪಾದಿತ ಶ್ರೀ ಎಂ.ಕೆ.ಮದೀಹಳ್ಳಿಯವರು ಕರ್ತವ್ಯಲೋಪ ಮಾಡಿರುತ್ತಾರೆಂದು ತೀರ್ಮಾನಿಸಿ ತೀರ್ಪನ್ನು ನೀಡಿದ್ದಾರೆ. ಈ ಬಗ್ಗೆ ಆರೋಪಿತರಿಗೆ ತಮ್ಮ ಹೇಳಿಕೆ ನೀಡಲು ಅವಕಾಶ ಕಲ್ಪಿಸಿ ಮೇಲೆ(೩)ರಲ್ಲಿ ಓದಲಾದ ದಿ:೧೬.೧೦.೦೫ರ ೨ನೇ ಕಾರಣ ಕೇಳುವ ನೋಟೀಸ್ ಹೊರಡಿಸಿ ವಿಚಾರಣಾ ವರದಿಯ ಪ್ರತಿಯನ್ನು ಒದಗಿಸಲಾಗಿತ್ತು. ಆದರೆ, ಆಪಾದಿತರು ನಿಗದಿತ ಸಮಯದಲ್ಲಿ ತಮ್ಮ ಲಿಖಿತ ಉತ್ತರವನ್ನು ನೀಡಿರುವುದಿಲ್ಲ.

ವಿಚಾರಣಾ ವರದಿ ಮತ್ತು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಲಾಗಿ, ಒಂದನೇ ಆರೋಪದ ಬಗ್ಗೆ ಕಡತವನ್ನು ಎರಡು ಮೂರು ಬಾರಿ ಕಾರ್ಯದರ್ಶಿಯವರೊಂದಿಗೆ ಚರ್ಚಿಸಲು ಹೋಗಿದ್ದರೆಂಬ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲ. ೧ ವರ್ಷ ೩ ತಿಂಗಳು ಅವರ ಸುಪರ್ದಿನಲ್ಲಿ ಈ ಕಡತವಿದ್ದು ಕಾರ್ಯದರ್ಶಿಯವರೊಂದಿಗೆ ಚರ್ಚಿಸಲು ಕೇವಲ ಎರಡು ಮೂರು ಬಾರಿ ಪ್ರಯತ್ನಪಟ್ಟಿದ್ದೇನೆ

ಎಂಬುದನ್ನು ನಂಬಲು ಸಾಧ್ಯವಿಲ್ಲ. ಎರಡನೇ ಆಪಾದನೆ ಬಗ್ಗೆ ಸದರಿ ಕಡತವು ಇವರ ಬಳಿ ಅಕ್ಟೋಬರ್ ೨೦೦೩ರ ತನಕ ಉಳಿದಿದ್ದು, ಅದೇ ಕಡತವನ್ನು ಅಕ್ಟೋಬರ್ ೨೦೦೨ರಲ್ಲಿ ಕಂದಾಯ ಸಚಿವರಿಗೆ ಎಂದು ಗಣಕಯಂತ್ರದಲ್ಲಿ ನಮೂದಿಸಿರುವುದನ್ನು ಯಾವುದೇ ರೀತಿಯಲ್ಲಿ ಸಮರ್ಥಿಸಿಕೊಳ್ಳಲು ವಿಫಲರಾಗಿದ್ದಾರೆ. ಉಪ ಕಾರ್ಯದರ್ಶಿ ಹುದ್ದೆಯ ಗುರುತರವಾದ ಜವಾಬ್ದಾರಿಯಲ್ಲಿದ್ದು, ಇದನ್ನು ಅವರ ಆಪ್ತ ಶಾಖೆಯ ಕಿರಿಯ ಸಹಾಯಕರ ಮೇಲೆ ನೆಟ್ಟಿರುವುದು ಸರಿಯಲ್ಲ. ಇದೊಂದು ದುರುದ್ದೇಶ ಪೂರ್ವಕ ಕ್ರಮವೆಂಬುದರಲ್ಲಿ ಸಂಶಯವಿಲ್ಲ. ಮೂರನೇ ಆರೋಪದ ಬಗ್ಗೆ ವಿಚಾರಣೆಯಲ್ಲಿ ಆಪಾದಿತರು ಹೆಚ್ಚು ಕಡಿಮೆ ಅವರ ಅಪರಾಧವನ್ನು ಒಪ್ಪಿಕೊಂಡಿರುತ್ತಾರೆ. ನಾಲ್ಕನೇ ಅಪರಾಧವೂ ಸಹ ಗಂಭೀರ ಸ್ವರೂಪದ್ದಾಗಿದೆ. ಅವರ ಹೆಸರಿಗೆ ಬಂದ ೧೯ ಕಡತಗಳನ್ನು ಗಣಕ ಯಂತ್ರದಲ್ಲಿ ಸ್ವೀಕರಿಸಿಕೊಳ್ಳದೇ ಸದರಿ ಕಡತಗಳನ್ನು ಭೌತಿಕವಾಗಿ ತಮ್ಮಲ್ಲೇ ಇಟ್ಟುಕೊಳ್ಳುವುದು ಸ್ಪಷ್ಟವಾದ ದುರ್ನಡತೆ.

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಳ್ಳದಿರಲು ಯಾವುದೇ ಸಕಾರಣಗಳಿಲ್ಲದಿರುವುದರಿಂದ ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 63 ಎಸ್ಇಎನ್ 2004, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ ಶ್ರೀ ಎಂ.ಕೆ.ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವೇತನವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು ೧೯೫೭ರ ನಿಯಮ ೮(iv-a)ರಡಿ ವೇತನ ಶ್ರೇಣಿ ರೂ.೭೪೦೦-೧೩೧೨೦ ರಲ್ಲಿನ ಹಾಲಿ ವೇತನ ರೂ.೧೨,೮೦೦ ರಿಂದ ೧೨೪೮೦/-ಕ್ಕೆ ಅಂದರೆ ಒಂದು ಹಂತ ಇಳಿಸುವ ದಂಡನೆಯನ್ನು ಈ ಕೆಳಕಂಡ ಷರತ್ತಿಗೆ ಒಳಪಟ್ಟು ವಿಧಿಸಿದೆ.

೧) ಈ ದಂಡನೆಯು ಶಾಶ್ವತ ಪರಿಣಾಮ ಹೊಂದಿರುತ್ತದೆ. ಅಂದರೆ ಇವರ ನಿವೃತ್ತಿ ನಂತರ ಸದರಿ ಕೆಳಗಿಳಿಸಿದ ವೇತನವು ಪುನ: ಸ್ಥಾಪಿತವಾಗುವುದಿಲ್ಲ.

೨) ದಂಡನೆ ಅವಧಿಯಲ್ಲಿ ಅವರು ಯಾವುದೇ ವಾರ್ಷಿಕ ವೇತನ ಬಡ್ತಿಗೆ ಅರ್ಹರಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 239

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

**ವಿಷಯ:** ಶ್ರೀ ಬಿ.ಶ್ರೀನಿವಾಸ್, ನಿವೃತ್ತ ಪ್ರಧಾನ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ-ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ ೫೬ ಎಸ್ಇಎನ್ ೯೯ ದಿ:೧೯.೧೨.೨೦೦೦.
2) ಶ್ರೀ ಬಿ.ಶ್ರೀನಿವಾಸ್, ನಿವೃತ್ತ ಮುಖ್ಯ ಇಂಜಿನಿಯರ್‌ರವರ ದಿ:೧೫.೦೩.೦೧ರ ಲಿಖಿತ ಉತ್ತರ.
3) ಅ.ಟಿ. ಸಂಖ್ಯೆ:ಸಿಆಸುಇ ೫೬ ಎಸ್ಇಎನ್ ೯೯ ದಿ:೦೧.೦೮.೦೩.
4) ಅನಧಿಕೃತ ಟಿಪ್ಪಣಿ ಸಂಖ್ಯೆ:ಲೋಇ ೧೧೦ ಸೇಇವಿ ೦೪ (೩೦.೦೪.೦೫) ದಿನಾಂಕ ರಹಿತ.

**ಪ್ರಸ್ತಾವನೆ :**

ಶ್ರೀ ಬಿ.ಶ್ರೀನಿವಾಸ್, ನಿವೃತ್ತ ಪ್ರಧಾನ ಇಂಜಿನಿಯರ್ ಇವರು ಲೋಕೋಪಯೋಗಿ ಇಲಾಖೆಯ ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ವಿಭಾಗದ ಮುಖ್ಯ ಇಂಜಿನಿಯರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿ:೦೧.೦೪.೯೮ ರಿಂದ ೩೦.೧೨.೯೯ರ ಅವಧಿಯಲ್ಲಿ ನೀತಿ ನಿಯಮಗಳನ್ನು ಉಲ್ಲಂಘಿಸಿ ಕಾನೂನು ಬಾಹಿರವಾಗಿ ಎರಡು ಕೋಟಿಗೂ ಮೇಲ್ಪಟ್ಟ ಮೌಲ್ಯದ ಸಂಚಾರಿ ನಾಮಫಲಕಗಳನ್ನು ಖರೀದಿಸುವ ಮೂಲಕ ಸರ್ಕಾರದ ಬೊಕ್ಕಸಕ್ಕೆ ಹೇರಳ ಪ್ರಮಾಣದಲ್ಲಿ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ ಮೇಲೆ(೧)ರಲ್ಲಿ ಓದಲಾದ ದಿ:೧೯.೧೨.೨೦೦೦ರ ನೋಟೀಸ್ ನೀಡಿ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಈ ಬಗ್ಗೆ ಆರೋಪಿತ ಅಧಿಕಾರಿಗಳಾದ ಶ್ರೀ ಬಿ.ಶ್ರೀನಿವಾಸ್ ರವರು ಮೇಲೆ(೨)ರಲ್ಲಿ ಓದಲಾದ ದಿ:೧೫.೦೩.೦೧ರ ಲಿಖಿತ ಉತ್ತರ ನೀಡಿ ತಮ್ಮ ಮೇಲಿನ ಆರೋಪವನ್ನು ನಿರಾಕರಿಸಿರುತ್ತಾರೆ.

ಮೇಲೆ(೩)ರಲ್ಲಿ ಓದಲಾದ ದಿ:೦೧.೦೮.೦೩ರಲ್ಲಿ ಶ್ರೀ ಬಿ.ಶ್ರೀನಿವಾಸ್, ನಿವೃತ್ತ ಇಂಜಿನಿಯರ್ ಇನ್ ಚೀಫ್ ರವರ ಉತ್ತರವನ್ನು ಪರಿಶೀಲಿಸಿ ವಿಚಾರಾಣೆಯನ್ನು ಮುಂದುವರಿಸುವ ಅವಶ್ಯಕತೆ ಕುರಿತು ಲೋಕೋಪಯೋಗಿ ಇಲಾಖೆಯ ಅಭಿಪ್ರಾಯ ಕೋರಲಾಗಿತ್ತು. ಮೇಲೆ(೪)ರಲ್ಲಿ ಓದಲಾದ ದಿನಾಂಕ (೩೦.೦೪.೦೫) ರಹಿತ ಅನಧಿಕೃತ ಟಿಪ್ಪಣಿಯಲ್ಲಿ ಆರೋಪಿತ ಅಧಿಕಾರಿ ಖರೀದಿಸಿದ್ದ ಸೂಚನಾ ಫಲಕಗಳನ್ನು ರಸ್ತೆಗಳಿಗೆ ಅಳವಡಿಸಿದ್ದು ಸದ್ಬಳಕೆಯಾಗಿರುವುದರಿಂದ ಆಪಾದಿತ ಅಧಿಕಾರಿಯು ಸಲ್ಲಿಸಿರುವ ಲಿಖಿತ ಹೇಳಿಕೆಯು ಪರಿಗಣನಾರ್ಹವಾಗಿ ಕಂಡು ಬಂದಿರುವುದರಿಂದ ಅವರ ಲಿಖಿತ ಹೇಳಿಕೆಯನ್ನು ಒಪ್ಪಬಹುದೆಂದು ಲೋಕೋಪಯೋಗಿ ಇಲಾಖೆಯು ಶಿಫಾರಸ್ಸು ಮಾಡಿದೆ ಹಾಗೂ ದಿ:೨೯.೧೧.೦೫ರ ಪತ್ರದಲ್ಲಿ ತನ್ನ ನಿಲುವನ್ನು ಪುನರುಚ್ಚರಿಸಿದೆ. ಆದುದರಿಂದ ಲೋಕೋಪಯೋಗಿ ಇಲಾಖೆಯ ಅಭಿಪ್ರಾಯವನ್ನು ಒಪ್ಪಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 56 ಎಸ್ಇಎನ್ 99, ಬೆಂಗಳೂರು, ದಿನಾಂಕ: 19ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಬಿ.ಶ್ರೀನಿವಾಸ್, ನಿವೃತ್ತ ಪ್ರಧಾನ ಇಂಜಿನಿಯರ್‌ರವರ ವಿರುದ್ಧ ಮಾಡಲಾದ ದೋಷಾರೋಪಣೆಗಳಿಂದ ಅವರನ್ನು ಆರೋಪಮುಕ್ತರನ್ನಾಗಿಸಿ ಆದೇಶಿಸಿದೆ.

ಈ ವಿಚಾರಣೆ ಪ್ರಕ್ರಿಯೆ ನಡೆಯದಿದ್ದಲ್ಲಿ ಆರೋಪಿತ ಅಧಿಕಾರಿಗಳಾದ ಶ್ರೀ ಬಿ.ಶ್ರೀನಿವಾಸ್‌ರವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 176

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

**ವಿಷಯ:** ಶ್ರೀ ಬಿ. ನಾಗರಾಜ್, ನಿವೃತ್ತ ಕೆ.ಎ.ಎಸ್ ಅಧಿಕಾರಿ, ಶ್ರೀ ಪಿ. ರಾಮಪ್ಪ, ನಿವೃತ್ತ ಶಿರಸ್ತೇದಾರ್ ಹಾಗೂ ಶ್ರೀ ಸಿ. ಕೃಷ್ಣಪ್ಪ ಮತ್ತು ಶ್ರೀ ಓ. ರಾಮಕೃಷ್ಣ, ಪ್ರಥಮ ದರ್ಜೆ ಸಹಾಯಕರುಗಳು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿಯವರ ನೇಮಕ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೪೮ ಎಸ್‌ಇಎನ್ ೨೦೦೩ ದಿನಾಂಕ ೦೮.೦೭.೨೦೦೫.

2) ಶಿವಮೊಗ್ಗ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಹಾಗೂ ಮಂಡನಾಧಿಕಾರಿಗಳು ಅವರ ಪತ್ರ ಸಂ:ಸಿಬ್ಬಂದಿ(೩)/ಸಿಆರ್/೧೬/ ೨೦೦೫-೦೬ ದಿ:೨೨.೧೨.೦೫.

**ಪ್ರಸ್ತಾವನೆ :**

ಶ್ರೀ ಬಿ.ನಾಗರಾಜ್, ನಿವೃತ್ತ ಕೆಎಎಸ್ ಅಧಿಕಾರಿ, ಶ್ರೀ ಪಿ.ರಾಮಪ್ಪ, ನಿವೃತ್ತ ಶಿರಸ್ತೇದಾರ್ ಹಾಗೂ ಶ್ರೀ ಸಿ. ಕೃಷ್ಣಪ್ಪ, ಶ್ರೀ ಓ. ರಾಮಕೃಷ್ಣ, ಪ್ರಥಮ ದರ್ಜೆ ಸಹಾಯಕರುಗಳು ಅವರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿ:08.07.05ರ ಸರ್ಕಾರಿ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಬಿ.ಟಿ. ವೀರಭದ್ರಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಶಿವಮೊಗ್ಗ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಲಾಗಿತ್ತು. ಈ ಪ್ರಕರಣದ ಮಂಡನಾಧಿಕಾರಿಗಳು ಹಾಗೂ ಶಿವಮೊಗ್ಗ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಮೇಲೆ (2)ರಲ್ಲಿ ಓದಲಾದ ದಿ:22.12.05ರ ಪತ್ರದಲ್ಲಿ ಈ ಪ್ರಕರಣದ ವಿಚಾರಣಾಧಿಕಾರಿಯಾದ ಶ್ರೀ ಬಿ.ಟಿ.ವೀರಭದ್ರಪ್ಪ ಅವರು ದಿ:18.10.05ರಂದು ನಿಧನ ಹೊಂದಿರುತ್ತಾರೆಂದು ತಿಳಿಸಿ ಅವರ ಬದಲಿಗೆ ಬೇರೊಬ್ಬ ವಿಚಾರಣಾಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ. ಸದರಿಯವರ ಕೋರಿಕೆಯನ್ನು ಪರಿಗಣಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ೧೯೫೭ರ ನಿಯಮ ೧೩ರೊಂದಿಗೆ ಓದಿಕೊಂಡಂತೆ ನಿಯಮ ೧೧(೨)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ದಿ:೦೮.೦೭.೦೫ರ ಸರ್ಕಾರಿ ಆದೇಶವನ್ನು ಭಾಗಶ: ಮಾರ್ಪಡಿಸಿ ಮೇಲೆ ಹೇಳಿದ ಆರೋಪಿತರುಗಳ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ, ಶಿವಮೊಗ್ಗ ಜಿಲ್ಲಾ ಪಂಚಾಯತ್ ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಉಳಿದಂತೆ ಶಿವಮೊಗ್ಗ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 256

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

**ವಿಷಯ:** ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿ ಅವರಿಗೆ ದಂಡನೆ ವಿಧಿಸಿದ ಆದೇಶದ ವಿರುದ್ಧ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿದ ಕುರಿತು.

**ಓದಲಾಗಿದೆ:** ೧) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೭೪ ಎಸ್‌ಇಎನ್ ೦೨ ದಿನಾಂಕ:೨೩.೦೫.೦೫.

೨) ಶ್ರೀ ರವಿಕುಮಾರ್ ಕಮಲಾಪುರಕರ್ ಅವರ ದಿನಾಂಕ:೨೪.೦೮.೦೫ರ ಮೇಲ್ಮನವಿ.

**ಪ್ರಸ್ತಾವನೆ :**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಅನುಮೋದಿಸಲ್ಪಟ್ಟ ಪಟ್ಟಿಯಲ್ಲಿಲ್ಲದ ಇಲಾಖೆಗೆ ಉಪಯೋಗಕ್ಕೆ ಬಾರದ ಹಾಗೂ ಔಷಧವಲ್ಲದ Amcrylae and Bio Adesive ಎಂಬ ರಸಾಯನಿಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟವುಂಟುಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಮೇಲೆ (೧)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿ, ಬೀದರ್ ಜಿಲ್ಲಾ ಪಂಚಾಯತ್ ಅವರಿಗೆ ೩ ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶ ಹೊರಡಿಸಲಾಗಿದೆ.

ಈ ಬಗ್ಗೆ ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 18ರಂತೆ ಗೌರವಾನ್ವಿತ ರಾಜ್ಯಪಾಲರಿಗೆ ಮೇಲೆ (2)ರಲ್ಲಿ ಓದಲಾದ ಮೇಲ್ಮನವಿ ಸಲ್ಲಿಸಿರುತ್ತಾರೆ. ಅವರು ಸಲ್ಲಿಸಿರುವ ಮೇಲ್ಕಂಡ ಮನವಿಯಲ್ಲಿ ತಮ್ಮ ಮೇಲೆ ವಿಧಿಸಿರುವ ದಂಡನೆಯನ್ನು ರದ್ದುಗೊಳಿಸಲು ಕೋರಿದ್ದಾರೆ.

ಶ್ರೀ ರವಿಕುಮಾರ್ ಕಮಲಾಪುರಕರ್, ಮುಖ್ಯ ಲೆಕ್ಕಾಧಿಕಾರಿ ಅವರು ಸಲ್ಲಿಸಿರುವ ಮೇಲ್ಮನವಿ ಮತ್ತು ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಕೆಳಕಂಡಂತಿರುತ್ತದೆ.

| ಮೇಲ್ಮನವಿಯ ಕಂಡಿಕೆ | ಷರಾ |
|---|---|
| 1. **ಕೆ.ಸಿ.ಎಸ್.(ಸಿಸಿಎ) ನಿಯಮಗಳು, ೧೯೫೭ರ ೧೮ನೇ ನಿಯಮದ (೨)ನೇ ಉಪ-ನಿಯಮದ(ಬಿ) ಖಂಡದನ್ವಯ ಮೇಲ್ಮನವಿ:** ಪ್ರತಿವಾದಿಯವರ ಆದೇಶ ಸಂಖ್ಯೆ:ಸಿಆಸುಇ ೭೪ ಎಸ್‌ಇಎನ್ ೦೨, ದಿ:೨೩.೦೫.೦೫ರಲ್ಲಿ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿ ೧೯೫೭ರ ನಿಯಮ ೮(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಪೀಲುದಾರರ ಮುಂದಿನ ೩ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆಹಿಡಿಯಲಾಗಿದೆ. ಸದರಿ ಆದೇಶದ ಪ್ರತಿಯನ್ನು ಅನುಬಂಧ-೧ರಲ್ಲಿ ಲಗತ್ತಿಸಿದೆ. ಅನುಬಂಧ-೧ರ ಬಗ್ಗೆ ಪ್ರಸ್ತುತ ಮೇಲ್ಮನವಿಯನ್ನು ಸಲ್ಲಿಸಲಾಗಿದೆ. | No comments. |

| | |
|---|---|
| 2.**ಶಿಸ್ತು ಪ್ರಕರಣದ ಹಿನ್ನೆಲೆ:-** ಬೀದರ್ ಜಿಲ್ಲಾ ಪಂಚಾಯತ್ ನಲ್ಲಿ ಅಪೀಲುದಾರರು ಮುಖ್ಯ ಲೆಕ್ಕಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾಗ Amecrylate A Bio Adhesive ಎಂಬ ರಸಾಯನಿಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟ ಉಂಟು ಮಾಡಿರುವುದಾಗಿ ಆಪಾದಿಸಿ ಒಂದೇ ವಿಷಯಕ್ಕೆ ಸಂಬಂಧಿಸಿರುವ ವಿಷಯವನ್ನು ಬಿಡಿಬಿಡಿಯಾಗಿ ಏಳು ಪ್ರತ್ಯೇಕ ಆರೋಪಗಳನ್ನು ಮಾಡಲಾಗಿದೆ. ಹಾಗೂ ಇವುಗಳ ವಿಚಾರಣೆಗೆ ಶ್ರೀ ಎಸ್.ಎಸ್.ಸಂಗೊಳ್ಳಿ, (ನಿ) ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿದ್ದು, ಅವರು ಸಲ್ಲಿಸಿರುವ ವಿಚಾರಣಾ ವರದಿಯನ್ನಾಧರಿಸಿ ಅನುಬಂಧ-೧ರಲ್ಲಿ ೩ ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ. | No comments. |
| 3.**ಶಿಸ್ತು ಪ್ರಾಧಿಕಾರಿಯವರು ಅಪೀಲುದಾರರು ಮಂಡಿಸಿರುವ ಅಂಶಗಳನ್ನು ಪರಿಗಣಿಸಿರುವುದಿಲ್ಲ:-** ಅನುಬಂಧ-೧ರ ದಂಡನಾದೇಶದ ಪುಟ-೩ರಲ್ಲಿ "ಆರೋಪಿತರಾದ ಶ್ರೀ ರವಿಕುಮಾರ್ ಕಮಲಾಪುರಕರ್ ಅವರು ದಿನಾಂಕ ಮತ್ತು ಸಹಿ ರಹಿತ ಉತ್ತರ ಸಲ್ಲಿಸಿ ವಿಚಾರಣಾಧಿಕಾರಿಯವರು ತಮ್ಮ ಮೇಲೆ ಹೊರಿಸಿರುವ ಎಲ್ಲಾ ೭ ಆರೋಪಗಳನ್ನು ಸಂಯೋಜಿಸಿ ನಿರ್ಣಯ ನೀಡಿರುತ್ತಾರೆ. ಪ್ರತ್ಯೇಕವಾಗಿ ಸಾಕ್ಷ್ಯಾಧಾರ ವಿಶ್ಲೇಷಣೆ ಮಾಡಿರುವುದಿಲ್ಲ ಹಾಗೂ ತಮ್ಮ ವಾದದಲ್ಲಿ ಮಂಡಿಸಿರುವ ಅಂಶಗಳನ್ನುಪರಿಗಣಿಸಿರುವುದಿಲ್ಲ, ವಿಷಯದ ಬಗ್ಗೆ ಮಾಹಿತಿ ಗೊತ್ತಿರದ ವ್ಯಕ್ತಿಗಳನ್ನು ಸಾಕ್ಷಿಗಳನ್ನಾಗಿ ಪರಿಗಣಿಸಿ ಅವರಿಂದ ಸಾಕ್ಷಿಯನ್ನು ಪಡೆಯಲಾಗಿದೆ, ಕಪ್ಪು ಪಟ್ಟಿಯಲ್ಲಿ ನಮೂದಾಗಿರುವ ಸಂಸ್ಥೆಯಿಂದ ಖರೀದಿಸಿರುವುದಾಗಿ ಆಪಾದಿಸಲಾಗಿದ್ದು, ಆದರೆ ಯಾವುದೇ ಕಪ್ಪು ಪಟ್ಟಿಯನ್ನು ಹಾಜರುಪಡಿಸಿರುವುದಿಲ್ಲ ಹಾಗೂ Amcrylate and Bio-adhesive ಖರೀದಿಸುವ ಬಗ್ಗೆ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿ ಸಭೆಯಲ್ಲಿ ನಿರ್ಣಯಿಸಿ ಅದರಂತೆ ಖರೀದಿಸಲಾಗಿದೆ ಮತ್ತು ಖರೀದಿಸಿರುವ ವಸ್ತು ದುರ್ಬಳಕೆ ಆಗಿದೆಯೆಂಬ ಬಗ್ಗೆ ಪುರಾವೆ ಇರುವುದಿಲ್ಲ. ಈ ವಸ್ತುವಿನ ಬೇಡಿಕೆಗೆ ಆರ್ಥಿಕ ಇಲಾಖೆಯು ಮಂಜೂರಾತಿ ನೀಡಿದ್ದು ಅದನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಯವರು ಖರೀದಿ ಮಾಡಿರುವುದರಿಂದ ಇದು ತಮ್ಮ ಕಾರ್ಯ ಹಂಚಿಕೆ ಹಾಗೂ ನಿರ್ವಹಿಸಿರುವ ಕಾರ್ಯದ ವ್ಯಾಪ್ತಿಯಲ್ಲಿ ಬಾರದೆ ಇರುವುದರಿಂದ, ಈ ಔಷಧಿಗೆ ಆಡಳಿತಾತ್ಮಕ ಅನುಮೋದನೆಯು ದೊರೆತ ನಂತರ ಔಷಧಿಯನ್ನು ಖರೀದಿಸಿರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಯಾವುದೇ ನಷ್ಟ ಉಂಟಾಗಿ ರುವುದಿಲ್ಲ ಮತ್ತು ಖರೀದಿಸಿರುವ ಔಷಧಿಗಳನ್ನು ಸಾರ್ವಜನಿಕರಿಗೆ ವಿತರಿಸಲಾಗಿದೆಯೆಂದು ತಿಳಿಸಿ ವಿಚಾರಣಾ ವರದಿಯಲ್ಲಿ ವಿಶ್ಲೇಷಿಸಿ, ಪರಿಗಣಿಸಿ ನಿರ್ಣಯ ನೀಡದೆ ಇರುವುದರಿಂದ ಹಾಗೂ ಪ್ರತ್ಯೇಕ ಆರೋಪಗಳ ಬಗ್ಗೆ ಪ್ರತ್ಯೇಕ ನಿರ್ಣಯಗಳನ್ನು ದಾಖಲಿಸದೇ ಇರುವುದರಿಂದ ತಾವು ಪ್ರಸ್ತಾಪಿಸಿರುವ ಅಂಶಗಳನ್ನು ಪರಿಗಣಿಸಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ" ಎಂದು ನಮೂದಿಸಿ ಸದರಿ ಉತ್ತರವನ್ನು ಪರಿಶೀಲಿಸಲಾಗಿ ಅವರ ವಿವರಣೆಗೆ ಸಹಿ ಮಾಡಿಲ್ಲದಿರುವುದರಿಂದ ಅದನ್ನು ಪರಿಗಣಿಸಲು ಸಾಧ್ಯವಿಲ್ಲ. ಆದಾಗ್ಯೂ ಅವರು ವಿವರಣೆಯಲ್ಲಿ ಯಾವುದೇ ಸಮರ್ಥನೀಯ ಕಾರಣಗಳು ಇಲ್ಲದಿರುವುದನ್ನು ಮನಗಂಡು ಎಂದು ನಮೂದಿಸಲಾಗಿದೆ. ಶಿಸ್ತು ಪ್ರಾಧಿಕಾರಿಯವರು ಆಪಾದಿತರು ಸಲ್ಲಿಸಿರುವ ವಿವರಣೆಯನ್ನು ಪರಿಗಣಿಸಲು ಸಾಧ್ಯವಿಲ್ಲವೆಂದು ನಮೂದಿಸಿರುವುದರಿಂದ ಸದರಿ ವಿವರಣೆಯನ್ನು ಪರಿಗಣಿಸಿರುವುದಿಲ್ಲ ಎನ್ನುವುದು ಸಾಬೀತಾಗಿದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯವರ ಮುಂದೆ ಮಂಡಿಸಿರುವ ಪ್ರತಿರಕ್ಷಣಾ ಹೇಳಿಕೆಯನ್ನು ಅಪೀಲು ಪ್ರಾಧಿಕಾರಿಯ ಪರಿಗಣನೆಗಾಗಿ ಈ ಕೆಳಗೆ ನಮೂದಿಸಿರುವಂತೆ ಒಪ್ಪಿಸಲಾಗಿದೆ. | All these contentions have been considered both by the Enquiry Officer and Disciplinary Authority. Hence no comments. |
| 4.**ವಿಚಾರಣಾ ವರದಿಯು ನಿಯಮಾನುಸಾರ ಇರುವುದಿಲ್ಲ:-** ಶಿಸ್ತು ಪ್ರಾಧಿಕಾರಿಯವರು ಪ್ರತ್ಯೇಕವಾದ ೭ ಆರೋಪಗಳನ್ನು ಮಾಡಿದ್ದು, ಪ್ರತಿಯೊಂದು ಆರೋಪದ ಬಗ್ಗೆ ಆಪಾದಿತರು ವಿವರವಾದ ಲಿಖಿತ ವಾದಗಳನ್ನು ಮಂಡಿಸಿರುತ್ತಾರೆ. ವಿಚಾರಣಾಧಿಕಾರಿಯವರು ಪ್ರತಿಯೊಂದು ಆರೋಪದ ಬಗ್ಗೆ ಪ್ರತ್ಯೇಕವಾದ ವಿಶ್ಲೇಷಣೆ ನಡೆಸದೆ ಎಲ್ಲಾ ೭ ಆರೋಪಗಳನ್ನೂ ಸಂಯೋಜಿಸಿ ನಿರ್ಣಯ ನೀಡಿರುತ್ತಾರೆ. ಈ ರೀತಿ ಎಲ್ಲಾ ಆರೋಪಗಳ ಬಗ್ಗೆ ಒಟ್ಟಾಗಿ ನಿರ್ಣಯ ನೀಡಿರುವುದು ಕೆ.ಸಿ.ಎಸ್.(ಸಿಸಿಎ) ನಿಯಮಗಳು, ೧೯೫೭ರ ೧೧ನೇ ನಿಯಮದ (೨೩)ನೇ ಉಪ-ನಿಯಮದ (i)(ಡಿ)ಖಂಡಕ್ಕೆ ವ್ಯತಿರಿಕ್ತವಾಗಿದೆ, ಏಕೆಂದರೆ ಸದರಿ ಖಂಡವು the report shall contain the findings on each article of charge and the reasons therefore ಎಂದು ಉಪಬಂಧ ಹೊಂದಿದೆ. ಪ್ರತಿಯೊಂದು ಆರೋಪದ ಬಗ್ಗೆ ಪ್ರತ್ಯೇಕ ನಿರ್ಣಯ ಹಾಗೂ ಪ್ರತ್ಯೇಕ ಕಾರಣಗಳನ್ನು ದಾಖಲಿಸದೆ ಇರುವುದರಿಂದ ವಿಚಾರಣಾ ವರದಿಯು ನಿಯಮ ೧೧(೨೩)(i)(ಡಿ)ಗೆ ವ್ಯತಿರಿಕ್ತವಾಗಿದೆ. | The Enquiry Officer has given a point wise discussion for each of the points raised by the appellant. Therefore, no violation of sub rule 11(23) is seen. |
| 5.**ವಿಚಾರಣಾ ವರದಿಯಲ್ಲಿ ಪ್ರತಿಯೊಂದು ಆರೋಪದ ಬಗ್ಗೆ ಸಾಕ್ಷ್ಯಾಧಾರಗಳ ಮೌಲ್ಯ ಮಾಪನ ಇರುವುದಿಲ್ಲ:-** ಕೆ.ಸಿ.ಎಸ್.(ಸಿಸಿಎ) ನಿಯಮಗಳು, ೧೯೫೭ರ ೧೧ನೇ ನಿಯಮದ (೨೩)ನೇ ಉಪನಿಯಮದ (i)(ಸಿ) ಖಂಡದ ಅನ್ವಯ a report shall be prepared and it shall contain an assessment of evidence in respect of each articles of charge ಎಂದಿದೆ. ಆದರೆ ಪ್ರಸ್ತುತ ವಿಚಾರಣಾ ವರದಿಯಲ್ಲಿ ೭ ಆರೋಪಗಳ ಬಗ್ಗೆ ಪ್ರತ್ಯೇಕವಾಗಿ ಸಾಕ್ಷ್ಯಾಧಾರಗಳ ವಿಶ್ಲೇಷಣೆ ಮಾಡಿರುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯು ನಿಯಮಗಳಿಗೆ ವ್ಯತಿರಿಕ್ತವಾಗಿದೆ ಹಾಗೂ ಪ್ರತಿಯೊಂದು ಆರೋಪದ ಬಗ್ಗೆ ಸಾಕ್ಷ್ಯಾಧಾರಗಳ ವಿಶ್ಲೇಷಣೆಯನ್ನು ಹೊಂದಿರುವುದಿಲ್ಲ. | As in para 4. |

| | |
|---|---|
| 6(1)(i).**ವಿಚಾರಣಾಧಿಕಾರಿಯವರು ಆಪಾದಿತರು ಮಂಡಿಸಿರುವ ಅಂಶಗಳನ್ನು ಪರಿಗಣಿಸಿರುವುದಿಲ್ಲ**-ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಒಂದನೇ ಆರೋಪದ ಬಗ್ಗೆ ನಮೂದಿಸಿರುವ ಅಂಶಗಳು ಅಂದರೆ,-<br>**ಸಾಕ್ಷಿದಾರರು ವಿಷಯದ ಬಗ್ಗೆ ಮಾಹಿತಿ ಹೊಂದಿರುವುದಿಲ್ಲ**:-ಆರೋಪದ ಬಗ್ಗೆ ಡಾ:ಜೆ.ಎಸ್.ರಾಜು, ಜಂಟಿ ಯೋಜನಾಧಿಕಾರಿ, ಆಕುಕ ನಿರ್ದೇಶನಾಲಯ, ಬೆಂಗಳೂರು ಇವರು ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿ ನುಡಿದಿರುತ್ತಾರೆ. ಸದರಿ ಸಾಕ್ಷಿಯು ದಿ:೦೧.೦೭.೦೪ರಿಂದ ಜಂಟಿ ಯೋಜನಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದು, ಡಾ:ಎಸ್.ಎಂ.ಜಂಗ್ಗೆ, ಯೋಜನಾ ನಿರ್ದೇಶಕರು ಸಲ್ಲಿಸಿರುವ ತನಿಖಾ ವರದಿ ನಿಶಾಣೆ ಪಿ-೧ನ್ನು ಗುರುತಿಸಿ ಸಾಕ್ಷಿ ನುಡಿದಿದ್ದಾರೆ. ಇವರು ಪ್ರಕರಣದ ತನಿಖೆ ನಡೆಸದೆ ಇರುವುದರಿಂದ ಇವರಿಗೆ ವಿಷಯದ ಬಗ್ಗೆ ಪ್ರತ್ಯೇಕ ಮಾಹಿತಿ ಇರುವುದಿಲ್ಲ ಎಂದು ವಾದವನ್ನು ಮಂಡಿಸಿರುತ್ತಾರೆ. ವಿಚಾರಣಾ ವರದಿಯ ಪುಟ-೮ರಲ್ಲಿ ಈ ಬಗ್ಗೆ ವಿಚಾರಣಾಧಿಕಾರಿಯವರು ತಮ್ಮ ನಿರ್ಣಯ ನೀಡಿ ಒಂದೇ ಸಾಕ್ಷಿದಾರರು ತನಿಖಾಧಿಕಾರಿಯ ಸಹಿಯನ್ನು ಗುರುತಿಸಿದ್ದಾರೆ. ಆದ್ದರಿಂದ ಅವರು ಸಾಕ್ಷಿ ಹೇಳಲು ಸಕ್ಷಮರಾಗಿಲ್ಲ ಎಂದು ಹೇಳಲು ಬರುವುದಿಲ್ಲವೆಂದು ನಿರ್ಣಯಿಸಿದ್ದಾರೆ. ಕೇವಲ ಸಹಿಯನ್ನು ಗುರುತಿಸುವ ವ್ಯಕ್ತಿಯು ವಿಷಯದ ಬಗ್ಗೆ ಮಾಹಿತಿ ಹೊಂದಿರುವವರು ಎಂದು ಹೇಳಲು ಬರುವುದಿಲ್ಲ. ತನಿಖಾಧಿಕಾರಿಯು ಆಪಾದಿತರ ಪಾಟೀ ಸವಾಲಿಗೆ ಉತ್ತರಿಸಿ ಆರೋಪಗಳನ್ನು ಸಾಬೀತು ಪಡಿಸಬೇಕಾಗಿದೆ. ಈ ರೀತಿ ಮಾಡದೆ ಇರುವುದರಿಂದ ಪ್ರಸ್ತುತ ಪ್ರಕರಣದಲ್ಲಿ ಆರೋಪಗಳು ಸಾಬೀತಾಗುವುದಿಲ್ಲ. | The appellant has questioned the wisdom of the Enquiry Officer. All these contentions have been considered by the Enquiry Officer. |
| (ii)**ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಕಪ್ಪು ಪಟ್ಟಿಯನ್ನು ವಿಚಾರಣಾ ವೇಳೆಯಲ್ಲಿ ಹಾಜರುಪಡಿಸಿರುವುದಿಲ್ಲ:-** ಕಪ್ಪು ಪಟ್ಟಿಯಲ್ಲಿ ನಮೂದಾಗಿರುವ ಸಂಸ್ಥೆಯಿಂದ ಖರೀದಿಸಿರುವುದಾಗಿ ಆಪಾದಿಸಲಾಗಿದೆ. ಆದರೆ ಯಾವುದೇ ಕಪ್ಪು ಪಟ್ಟಿಯನ್ನು ವಿಚಾರಣಾಧಿಕಾರಿಯವರ ಮುಂದೆ ಹಾಜರುಪಡಿಸದೆ ಇರುವುದರಿಂದ ಒಂದನೇ ಆರೋಪ ಸಾಬೀತಾಗಿರುವುದಿಲ್ಲ ಎಂದು ವಾದಗಳನ್ನು ಮಂಡಿಸಿದ್ದಾರೆ. ಈ ವಾದದ ಅಂಶವನ್ನು ವಿಚಾರಣಾ ವರದಿಯ ಪುಟ-೧೧ರಲ್ಲಿ ಪರಿಗಣಿಸಿ ಸುತ್ತೋಲೆ ಇಲ್ಲಾ ಅನ್ನುವುದು ಆಪಾದಿತರ ವಾದ ಅಲ್ಲ. ಆದರೆ ತಮಗೆ ತಲುಪಿಲ್ಲ ಅನ್ನುವುದು ಅವರ ವಾದ. ಅದು ಒಪ್ಪುವಂಥದಲ್ಲ. ಹಾಗೆ ಸರ್ಕಾರದ ಸುತ್ತೋಲೆಯನ್ನು ಪ್ರತಿಯೊಬ್ಬ ಅಧಿಕಾರಿಗೆ ವೈಯಕ್ತಿಕವಾಗಿ ತಲುಪಿಸಿ ತಲುಪೊಪ್ಪಿಗೆ ಪಡೆಯಬೇಕಾಗಿಲ್ಲ ಮತ್ತು ಇಂಥ ಸಂದರ್ಭಗಳಲ್ಲಿ ಅಂಥಹ ವಾದ ಸಹಜ ಅದನ್ನು ಒಪ್ಪಲಾಗದು ಎಂದು ನಿರ್ಣಯ ದಾಖಲಿಸಿರುತ್ತಾರೆ. ಪ್ರಸ್ತುತ ಪ್ರಕರಣದಲ್ಲಿ ಉಲ್ಲೇಖಿಸಿರುವ ಸುತ್ತೋಲೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವುದಿಲ್ಲ. ಆದ್ದರಿಂದ ಸರ್ಕಾರದ ಹಂತದಲ್ಲಿ ಹೊರಡಿಸಿರುವ ಸುತ್ತೋಲೆಯು ಬಗ್ಗೆ ಅದನ್ನು ಸಂಬಂಧಪಟ್ಟವರಿಗೆ ತಲುಪಿಸದಿದ್ದಲ್ಲಿ ಅವರಿಗೆ ಆ ಬಗ್ಗೆ ಮಾಹಿತಿ ಇರುವುದಿಲ್ಲವೆಂಬುದನ್ನು ವಿಚಾರಣಾಧಿಕಾರಿಯವರು ಪರಿಗಣಿಸಿರುವುದಿಲ್ಲ. ಈ ಅಂಶದ ಇನ್ನೊಂದು ಭಾಗವೆಂದರೆ ಕಪ್ಪು ಪಟ್ಟಿಯನ್ನು ವಿಚಾರಣಾ ವೇಳೆಯಲ್ಲಿ ಹಾಜರುಪಡಿಸಿಲ್ಲವೆಂಬ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖವಿರುವುದಿಲ್ಲ. | The appellant had all the opportunity to insist the documents listed in the Annexure-III to the Article of Charges. His contention that the circular black listing some suppliers should have been published in the Gazette and supplied to him cannot be considered as a valid ground for his defence. |
| (iii)**ಆಪಾದಿತರು ಮಂಡಿಸಿರುವ ಲಿಖಿತ ವಾದದಲ್ಲಿ "ಆಪಾದಿತ ಅಧಿಕಾರಿಯು ಖರೀದಿಯ ಬಗ್ಗೆ ಶಿಫಾರಸ್ಸು ಮಾಡಿರುವುದಿಲ್ಲ:-** ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿದಾರರಾದ ಡಾ:ಜೆ.ಎಸ್.ರಾಜು ಇವರು ಪಾಟೀ ಸವಾಲಿನ ತಮ್ಮ ಉತ್ತರದಲ್ಲಿ "ದಿ:೨೫.೦೨.೦೨ರಂದು ನಡೆದ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಸಭೆಯಲ್ಲಿ ವಿಷಯ ೪(೩)ರಂತೆ ಅಮಿಕ್ರಿಯೋಲೇಟ್ (Amecrylate) ಬಯೋ ಅಡೆಸಿವ್ (a-Bio adhesive) ೦.೫೦ ಎಂ.ಎಲ್. ಚರ್ಚೆ ನಂತರ ಖರೀದಿಸಲು ಮಂಜೂರಾತಿ ಕೊಡಲಾಗಿ ಕಂಡು ಬರುತ್ತದೆ" ಎಂದು ಸಾಕ್ಷಿ ನುಡಿದಿದ್ದಾರೆ. ಆದ್ದರಿಂದ ಆಪಾದಿತ ಅಧಿಕಾರಿಯು ಖರೀದಿಯ ಬಗ್ಗೆ ಶಿಫಾರಸ್ಸು ಮಾಡಿರುವುದಿಲ್ಲ. ಆದರೆ ಬೀದರ್ ಜಿಲ್ಲಾ ಪಂಚಾಯ್ತಿಯ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯು ಖರೀದಿ ಮಂಜೂರಾತಿ ನೀಡಿರುವುದು ಸಾಬೀತಾಗಿದೆ. ಸಾಕ್ಷಿದಾರರ ಸಾಕ್ಷಿ ಹೇಳಿಕೆಯಲ್ಲಿ ಆಪಾದಿತ ಶ್ರೀ ರವಿಕುಮಾರ್ ಕಮಲಾಪುರ್ ಇವರು ಈ ಔಷಧಿ ಖರೀದಿಗೆ ಶಿಫಾರಸ್ಸು ಮಾಡಿರುವುದನ್ನು ತಿಳಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಒಂದನೇ ಆರೋಪವು ಸಾಬೀತಾಗಿಲ್ಲ ಎಂದು ನಿರ್ಣಯಿಸಲು ಕೋರಿದೆ" ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಈ ಬಗ್ಗೆ ಪರಿಗಣಿಸಿರುವುದಿಲ್ಲ. | The Statement of witness and the cross examination by the accused has been conducted by the Enquiry Officer in complete transferency. The contention which was not been placed before the Enquiry Officer at the time of enquiry cannot be made a point of defence here. |
| (iv)**.ಆಪಾದಿತರು ತಮ್ಮ ಲಿಖಿತ ವಾದದಲ್ಲಿ "ಖರೀದಿಸಿರುವ ವಸ್ತುವು ದುರ್ಬಳಕೆ ಆಗಿರುವ ಬಗ್ಗೆ ಸಾಕ್ಷಾಧಾರಗಳು ಇರುವುದಿಲ್ಲ:-** ಖರೀದಿಸಿರುವ Amecrylate a Bio adhesive ಇದು ದುರ್ಬಳಕೆ ಆಗಿದೆ ಎಂಬ ಬಗ್ಗೆ ನಿಶಾನೆ ಪಿ-೧ರ ತನಿಖಾ ವರದಿಯಲ್ಲಾಗಲಿ ಅಥವಾ ಸಂಬಂಧಪಟ್ಟ ಕಡತದಲ್ಲಾಗಲಿ ಅಥವಾ ಸಾಕ್ಷಿ ಹೇಳಿಕೆಯಲ್ಲಾಗಲಿ ಇರುವುದಿಲ್ಲ. ಆದ್ದರಿಂದ ಖರೀದಿಸಿರುವ ವಸ್ತುವು ದುರ್ಬಳಕೆಯಾಗಿದೆ ಎನ್ನುವ ಆರೋಪ ಸಾಬೀತಾಗಿರುವುದಿಲ್ಲ" ಎಂದು ಮಂಡಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | The charges against the accused is that they have colluded in placing orders to a black listed firm. Therefore, his point that the stocks have been properly utilized or not misused does not arise. |
| (v)**.ಆಪಾದಿತರು ಮಂಡಿಸಿರುವ ಲಿಖಿತ ವಾದದಲ್ಲಿ "ಒಂದನೇ ಆರೋಪದ ಬಗ್ಗೆ ಆಪಾದಿತ ಅಧಿಕಾರಿಯ ಸಮರ್ಥನೆ:-** ಜಿಲ್ಲಾ ಪಂಚಾಯತಿಯ ಆರೋಗ್ಯ ಸ್ಥಾಯಿ ಸಮಿತಿಯು ಔಷಧಿಗಳ ಖರೀದಿ ಬಗ್ಗೆ ತೀರ್ಮಾನ ಕೈಕೊಂಡು ಅದನ್ನು ಜಿಲ್ಲಾ ಪಂಚಾಯಿತಿ ಸಾಮಾನ್ಯ ಸಭೆಯಲ್ಲಿ ಅಂಗೀಕರಿಸಿದ ನಂತರ ಸರಬರಾಜು ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಈ ಪ್ರಕರಣದಲ್ಲಿ ಸ್ಥಾಯಿ ಸಮಿತಿಯ ದಿ:೨೫.೦೨.೦೨ರಂದು ನಡೆಸಿದ ಸಭೆಯ ವಿಷಯ ಸಂ:೪(೩)ರಲ್ಲಿ ಈ ಔಷಧಿಯನ್ನು | The appellant argues that the departmental officers should have given information about the black listed firms |

| | |
|---|---|
| ಖರೀದಿಸಲು ಜಿಲ್ಲಾ ಆರೋಗ್ಯಾಧಿಕಾರಿಗಳಿಂದ ಬಂದ ಪ್ರಸ್ತಾವನೆಯನ್ನು ಮಂಜೂರು ಮಾಡಲಾಗಿದೆ. ಈ ಔಷಧಿಯು ಕಪ್ಪು ಪಟ್ಟಿಯಲ್ಲಿ ಸೇರಿರುವ ಬಗ್ಗೆ ಇಲಾಖಾ ಅಧಿಕಾರಿಗಳು ಸ್ಥಾಯಿ ಸಮಿತಿಗೆ ಮಾಹಿತಿ ನೀಡಬೇಕಾಗಿತ್ತು. ಸ್ಥಾಯಿ ಸಮಿತಿಯು ತನ್ನ ಆಯವ್ಯಯದ ಒಂದು ಅಂಶದಲ್ಲಿ ಈ ಔಷಧಿ ಖರೀದಿಗೆ ನಿರ್ಣಯಿಸಿರುವ ಬಗ್ಗೆ ಮಾಡಲಾದ ನಡವಳಿಕೆಗಳನ್ನು ಜಿಲ್ಲಾ ಪಂಚಾಯತಿಯು ಸಾಮಾನ್ಯ ಸಭೆಯಲ್ಲಿ ಅಂಗೀಕರಿಸಿದ್ದು ಇರುತ್ತದೆ. ಅಲ್ಲದೆ ಈ ಔಷಧಿಯ ಬಗ್ಗೆ ವೈದ್ಯಾಧಿಕಾರಿಗಳಿಗೆ ಸ್ಥಾಯಿ ಸಮಿತಿ ಅಧ್ಯಕ್ಷರಿಗೆ ಮತ್ತು ಜಿಲ್ಲಾ ಪಂಚಾಯತಿಯ ಉನ್ನತ ಅಧಿಕಾರಿಗಳಿಗೆ ನೀಡಲಾದ ವಿಡಿಯೋ ಪ್ರದರ್ಶನವನ್ನು ವೀಕ್ಷಿಸಿ ಚರ್ಚಿಸಿದ ನಂತರ ಈ ವಸ್ತುವಿನ ಬೇಡಿಕೆ ಪರಿಗಣಿಸಿ ಆರ್ಥಿಕ ಇಲಾಖೆಯ ಮಂಜೂರಾತಿಗಾಗಿ ಕೋರಿಕೆ ಸಲ್ಲಿಸಿದೆ. ಆರ್ಥಿಕ ಇಲಾಖೆಯು ಈ ಆಯವ್ಯಯಕ್ಕೆ ಒಪ್ಪಿಗೆ ನೀಡಿದೆ. ಆದುದರಿಂದ ಈ ಆರೋಪಕ್ಕೆ ಒಂದನೇ ಆಪಾದಿತ ಅಧಿಕಾರಿಯು ಹೊಣೆಗಾರರಲ್ಲ ಎಂದು ತಿಳಿಸಲಾಗಿದೆ" ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | when the matter was discussed by Standing Committee. Although, it is the collective responsibility of all the officers to examine all proposals relating to purchases strictly in accordance with the guidelines, the responsibility of the appellant here cannot be ignored. Moreover, a joint enquiry against all the concerned had been conducted. Therefore, his argument in passing the responsibility on other officers cannot be considered. |
| (vi)**ಆಪಾದಿತರು ಮಂಡಿಸಿರುವ ಲಿಖಿತ ವಾದದಲ್ಲಿ ಒಂದನೇ ಆರೋಪವು ಆಪಾದಿತರ ಕಾರ್ಯಹಂಚಿಕೆಗೆ ಒಳಪಡುವುದಿಲ್ಲ:-** ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಸಭೆಯಲ್ಲಿ ಆಪಾದಿತರು ಭಾಗವಹಿಸಿರುವುದಿಲ್ಲ. ಈ ಹಿಂದೆ ಖರೀದಿ ಸಮಿತಿಗಳು ಅಸ್ತಿತ್ವದಲ್ಲಿದ್ದಾಗ ಸದರಿ ಸಮಿತಿಗಳ ಸಭೆಯಲ್ಲಿ ಮುಖ್ಯ ಲೆಕ್ಕಾಧಿಕಾರಿಗಳು ಭಾಗವಹಿಸಿ ಸಭೆಗೆ ಸೂಕ್ತ ಮಾಹಿತಿ ನೀಡಬೇಕಾಗಿತ್ತು. ಆದರೆ ಸುತ್ತೋಲೆ ಸಂ:ಗಾಅಪ ೨೪೨ ಜಿಪಸ ೨೦೦೦, ದಿ:೧೦.೦೮.೦೨ರಲ್ಲಿ ಖರೀದಿ ಸಮಿತಿಗಳನ್ನು ಕೈಬಿಡಲಾಗಿದೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | The appellant states that he has not attended Education and Health Standing meetings but has not denied that he has disassociated himself from any of the deliberations in the proposal/file. |
| (2)(i).ಆಪಾದಿತರು ತಮ್ಮ ಲಿಖಿತ ವಾದದಲ್ಲಿ **ಎರಡನೇ ಆರೋಪದ ಬಗ್ಗೆ ನಮೂದಿಸಿರುವ ಅಂಶಗಳು ಅಂದರೆ:-ಆಪಾದಿತರು ತಮ್ಮ ಲಿಖಿತ ವಾದದಲ್ಲಿ "ಆಪಾದಿತರು ಖರೀದಿಗಾಗಿ ಶಿಫಾರಸ್ಸು ಮಾಡಿರುವುದಿಲ್ಲ:-** ನಿಶಾನೆ ಪಿ-೧ ತನಿಖಾ ವರದಿಯ ೨ನೇ ಪುಟದಲ್ಲಿ ದಿ:೨೫.೦೨.೦೨ರಂದು ನಡೆದ ಶಿಕ್ಷಣ ಹಾಗೂ ಆರೋಗ್ಯ ಸಮಿತಿಯ ಸ್ಥಾಯಿ ಸಮಿತಿಯಲ್ಲಿ ಪುಟ-೯,೪(೩)ರಲ್ಲಿ Amecryolate a Bio adhesive ೦.೫ml. ಔಷಧಿಯನ್ನು M/s Karnataka State Industrial Supplies and Marketing Co-operative Federation, Bangalore ಮುಖಾಂತರ ಖರೀದಿಸಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಬೀದರ್ ಇವರ ಕೋರಿಕೆಯ ಮೇರೆಗೆ ಮಂಜೂರಾತಿ ನೀಡಿತ್ತು" ಎಂದು ನಮೂದಿಸಿರುತ್ತಾರೆ. ಆದ್ದರಿಂದ ಆಪಾದಿತ ಅಧಿಕಾರಿಯು ಖರೀದಿಗಾಗಿ ಶಿಫಾರಸ್ಸು ಮಾಡಿರುತ್ತಾರೆ ಎನ್ನುವುದು ಸಾಬೀತಾಗಿರುವುದಿಲ್ಲ. ಇದು ಅಲ್ಲದೆ ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿದಾರರಾದ ಡಾ:ಜೆ.ಎನ್.ರಾಜು ಇವರು ತಮ್ಮ ಸಾಕ್ಷಿ ಹೇಳಿಕೆಯಲ್ಲಿ ಆಪಾದಿತ ಶ್ರೀ ರವಿಕುಮಾರ್ ಕಮಲಾಪುರಕರ್ ಇವರು ಈ ಔಷಧಿ ಖರೀದಿಗೆ ಶಿಫಾರಸ್ಸು ಮಾಡಿದ್ದಾರೆ ಎಂಬ ಬಗ್ಗೆ ಸಾಕ್ಷಿ ನುಡಿದಿರುವುದಿಲ್ಲ. ಆದ್ದರಿಂದ ಔಷಧಿಯನ್ನು ಖರೀದಿಸುವ ಬಗ್ಗೆ ಆಪಾದಿತ ಅಧಿಕಾರಿಯು ಶಿಫಾರಸ್ಸು ಮಾಡಿರುವುದಿಲ್ಲ ಎನ್ನುವುದು ಸಾಬೀತಾಗಿದೆ ಎಂದು ತಿಳಿಸಿರುತ್ತಾರೆ. ಆದರೆ ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | The enquiry has clearly brought out that the appellant has failed to examine the proposal throughly. Therefore, his contention that he has not recommended for purchase cannot be considered. |
| (ii).**ಆಪಾದಿತರು ತಮ್ಮ ಲಿಖಿತ ವಾದದಲ್ಲಿ "ಕೇಂದ್ರ ಪುರಸ್ಕೃತ ಯೋಜನೆಯ ಮಾಹಿತಿಯನ್ನು ಒಂದನೇ ಆಪಾದಿತರಿಗೆ ಮಂಡಿಸಿರುವುದಿಲ್ಲ:-** ಖರೀದಿಗೆ ಸಂಬಂಧಪಟ್ಟ ಕಡತದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮದಲ್ಲಿ ಖರೀದಿಸುವ ಔಷಧಿಗಳ ಪಟ್ಟಿಯನ್ನಾಗಲಿ, ಅಥವಾ ಯೋಜನೆಯ ರೂಪುರೇಷೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಬೀದರ್ ಮಂಡಿಸಿರುವುದಿಲ್ಲ. ಇಲಾಖೆಯ ಆಂತರಿಕ ಸುತ್ತೋಲೆ, ಜ್ಞಾಪನ, ಯೋಜನೆಗಳ ಮಾಹಿತಿಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಬೀದರ್ ಇವರು ಮಂಡಿಸಿದಲ್ಲಿ ಮಾತ್ರ ಒಂದನೇ ಆಪಾದಿತರಿಗೆ ಅವುಗಳನ್ನು ಪರಿಶೀಲಿಸಲು ಅವಕಾಶವಿದೆ. ಆದ್ದರಿಂದ ಎರಡನೇ ಆರೋಪವು ಆಪಾದಿತರ ಕಾರ್ಯಹಂಚಿಕೆಗೆ ಒಳಪಡುವುದಿಲ್ಲ ಎಂದು ತಿಳಿಸಲಾಗಿದೆ" ಎಂದು ಮಂಡಿಸಿರುತ್ತಾರೆ. ಆದರೆ ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | As in para 6(1)(v). |
| (iii).**ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಎರಡನೇ ಆರೋಪದ ಬಗ್ಗೆ ಆಪಾದಿತ ಅಧಿಕಾರಿಯವರ ಸಮರ್ಥನೆ:-** ಜಿಲ್ಲಾ ಪಂಚಾಯಿತಿಯ ಕೋರಿಕೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಿ ಅನುದಾನ ಲಭ್ಯವಿರುವ ಬಗ್ಗೆ ಮತ್ತು ಮರು ಹೊಂದಾಣಿಕೆ ಆದೇಶ ನಿಶಾನೆ ಪಿ-೩ರ ಆಧಾರದ ಮೇಲೆ ಖರೀದಿ ಪ್ರಕ್ರಿಯೆಯನ್ನು ಜಿಲ್ಲಾ ಆರೋಗ್ಯ ಅಧಿಕಾರಿಗಳು ನಿರ್ವಹಿಸಿರುತ್ತಾರೆ. | The contention is totally misconcieved. Final approval by the Competent Authority is |

| | |
|---|---|
| ಆರ್ಥಿಕ ಇಲಾಖೆಯು ಈ ಪ್ರಕರಣದಲ್ಲಿ ಒಪ್ಪಿಗೆ ನೀಡಿದೆ. ಆದುದರಿಂದ ಈ ಆರೋಪಕ್ಕೆ ಆಪಾದಿತನಾದ ನಾನು ಹೊಣೆಗಾರನಲ್ಲ ಎಂದು ತಿಳಿಸಲಾಗಿದೆ ಎಂದು ಮಂಡಿಸಿರುತ್ತಾರೆ. ಆದರೆ ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | different from the procedural methods to be adopted by the concerned officers for making purchases. Hence there is no force in his arguments. |
| (3)(i).**ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಮೂರನೇ ಆರೋಪದ ಬಗ್ಗೆ ನಮೂದಿಸಿರುವ ಅಂಶಗಳು ಅಂದರೆ, ಆಪಾದಿತರು ತಮ್ಮ ಲಿಖಿತ ವಾದದಲ್ಲಿ ೩ನೇ ಆರೋಪದ ಬಗ್ಗೆ ಸಾಕ್ಷಿಯು ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲ:-** ೩ನೇ ಆರೋಪದ ಬಗ್ಗೆ ಡಾ:ಕೆ.ಎನ್.ರಾಜು ಇವರು ಯಾವುದೇ ಸಾಕ್ಷಿಯನ್ನು ನುಡಿದಿರುವುದಿಲ್ಲ. ನಿಶಾನೆ ಪಿ-೧ ತನಿಖಾ ವರದಿಯಲ್ಲಿ ಯೋಜನಾ ನಿರ್ದೇಶಕರಿಂದ ಅನುಮತಿ ಪಡೆದು ಔಷಧಿಯನ್ನು ಖರೀದಿಸಬೇಕಿತ್ತು ಎಂಬ ಬಗ್ಗೆ ನಮೂದು ಇಲ್ಲ. ಆದ್ದರಿಂದ ೩ನೇ ಆರೋಪವು ಸಾಬೀತಾಗುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | The appellant argues that there is no analysis or findings about charge no.3. He also states that the P.W. Dr. J.N. Raju has not given any statement. If this is so the question of recording any analysis in the report does not arise. |
| (ii).**ಆಪಾದಿತರು ತಮ್ಮ ಲಿಖಿತ ವಾದದಲ್ಲಿ ೩ನೇ ಆರೋಪದ ಬಗ್ಗೆ ಆಪಾದಿತ ಅಧಿಕಾರಿಯವರ ಸಮರ್ಥನೆ:-** ಜಿಲ್ಲಾ ಪಂಚಾಯಿತಿಯ ನಿರ್ಣಯದ ನಂತರ ಯೋಜನಾ ನಿರ್ದೇಶಕರು, ಆರ್.ಸಿ.ಎಚ್.ನಿರ್ದೇಶಕರು, ಆಕುಕ ಸೇವೆಗಳು, ಇವರ ಪೂರ್ವಾನುಮತಿ ಪಡೆಯಬೇಕಾಗಿದ್ದಲ್ಲಿ ಅದನ್ನು ಆರೋಗ್ಯ ಇಲಾಖೆ ಅಧಿಕಾರಿಗಳು ಪಡೆಯಬೇಕಾಗಿತ್ತು. ಈ ಪ್ರಕರಣದಲ್ಲಿ ಆರೋಗ್ಯ ಇಲಾಖೆಯ ಅಧಿಕಾರಿಗಳ ಅನುಮತಿ ಪಡೆದಿರುವ ಬಗ್ಗೆ ಆಪಾದಿತ ಅಧಿಕಾರಿಗೆ ಮಾಹಿತಿ ಇರುವುದಿಲ್ಲ. ಆದುದರಿಂದ ಈ ಆರೋಪವನ್ನು ನಿರಾಕರಿಸಲಾಗಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | The appellant indirectly admits that the Health Department officers should have obtained the approval from Director, Health Services after the decisions of Zilla Panchayat. The point here is why the appellants and others not indicated this fact while it was discussed in Zilla Panchayat. Therefore, it is an after thought of the appellant. |
| (iii).**ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಖರೀದಿಯ ಬಗ್ಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅನುಮತಿ ಕೋರಲಾಗಿತ್ತು:-** ಜಿ ಪಂ ಬೀ: ಆ ಶಾ:ಮು ಕಾ ಅ:೨೦೦೧-೦೨ರಲ್ಲಿ Amecrylate a bio adhesive ಖರೀದಿಯ ಬಗ್ಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅನುಮತಿ ಕೋರಲಾಗಿತ್ತು. ಆದರೆ, ಸದರಿ ಇಲಾಖೆಯಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ಈ ರೀತಿ ಪ್ರಸ್ತಾವನೆಗೆ ಆಕುಕ ಇಲಾಖೆಯು ಸ್ಪಂದಿಸದೇ ಇರುವುದರಿಂದ ಹಾಗೂ ಆಯವ್ಯಯದ ಮೊಬಲಗು ದಿ:೩೧.೦೩.೦೨ರಂದು lapse ಆಗುವುದರಿಂದ ಮತ್ತು ಜಿಲ್ಲಾ ಪಂಚಾಯತಿಗೆ ಆಗುವ ನಷ್ಟವನ್ನು ತಡೆಗಟ್ಟಲು ಖರೀದಿಯನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಬೀದರ್ ಇವರು ಮಾಡಿರುತ್ತಾರೆ. ಇದು ಆಪಾದಿತರ ಕಾರ್ಯಹಂಚಿಕೆ ಹಾಗು ನಿರ್ವಹಿಸಿರುವ ಕಾರ್ಯದ ವ್ಯಾಪ್ತಿಯಲ್ಲಿ ಬಾರದೆ ಇರುವುದರಿಂದ ೩ನೇ ಆರೋಪದಿಂದ ಆಪಾದಿತ ಅಧಿಕಾರಿಯನ್ನು ದೋಷಮುಕ್ತಗೊಳಿಸಿ ವರದಿ ನೀಡಲು ಕೋರಲಾಗಿದೆ. ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | The appellant seems to be speaking on behalf of the DHO, Bidar which has no relevance to the charge. |
| (4)(i).**ಆಪಾದಿತರು ತಮ್ಮ ಲಿಖಿತ ವಾದದಲ್ಲಿ ನಾಲ್ಕನೇ ಆರೋಪದ ಬಗ್ಗೆ ನಮೂದಿಸಿರುವ ಅಂಶಗಳು ಎಂದರೆ, ಆಪಾದಿತರು ತಮ್ಮ ಲಿಖಿತ ವಾದದಲ್ಲಿ ೧೫ ವಿಧವಾದ ಔಷಧಿಗಳ ಹೊರತು ಬೇರೆ ಔಷಧಿಗಳನ್ನು ಖರೀದಿಸಬಾರದು ಎಂಬ ಬಗ್ಗೆ ಪ್ರತಿಬಂಧ ಇರುವುದಿಲ್ಲ:-** ನಿಶಾನೆ ಪಿ-೩ಕ್ಕೆ ಲಗತ್ತಿಸಿರುವ ಪಟ್ಟಿಯಲ್ಲಿ ನಮೂದಿಸಿರುವ ಔಷಧಿಗಳ ಪೈಕಿ ಆಂಟಿಬಯಾಟಿಕ್ಸ್‌ಗಳನ್ನು ಬಿಟ್ಟು ಮಿಕ್ಕಲ್ಲವನ್ನು ಕೊಳ್ಳಬೇಕು ಎಂಬುದಾಗಿ ಕಲ್ಪಿಸಲಾಗಿದೆ. ಆದರೆ ಹೊಸ ಔಷಧಿಗಳನ್ನು ಖರೀದಸಬಾರದು ಎಂಬ ನಿರ್ಬಂಧವಿರುವುದಿಲ್ಲ. ಮಾರುಕಟ್ಟೆಯಲ್ಲಿ ಬರುವ ಹೊಸ ಸಂಶೋಧನೆಗಳ ಲಾಭವು ಸಾರ್ವಜನಿಕರಿಗೆ ಲಭ್ಯವಾಗಬೇಕೆಂಬ ಸದುದ್ದೇಶದಿಂದ ಪ್ರಸ್ತಾವನೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಬೀದರ್ ಇವರು ಸಲ್ಲಿಸಿದ್ದಾರೆಂದು ಭಾವಿಸಲಾಗಿದೆ. ಪ್ರಸ್ತಾವನೆಯನ್ನು ಆಪಾದಿತ ಅಧಿಕಾರಿಯವರು ಸಲ್ಲಿಸದೇ ಇರುವುದರಿಂದ ಈ ಆರೋಪವು ಅವರ ವ್ಯಾಪ್ತಿಗೆ ಬರುವುದಿಲ್ಲ ಎಂದು ತಿಳಿಸಿರುತ್ತಾರೆ.ವಿಚಾರಣಾ ವರದಿಯ ೧೧ನೇ ಪುಟದಲ್ಲಿ ಈ ಬಗ್ಗೆ ವಿಚಾರಣಾಧಿಕಾರಿಯವರು ಪರಿಗಣಿಸಿರುತ್ತಾರೆ. ಆದರೆ ವಾದದಲ್ಲಿ ಮಂಡಿಸಿರುವ ಅಂಶವನ್ನು ಯಾವುದೇ ಪರಿಗಣನೆ ಇಲ್ಲದೆ ಕೈಬಿಡಲಾಗಿದೆ. ಸಾರ್ವಜನಿಕರಿಗೆ ಈ ಔಷಧಿಯು ಉಪಯುಕ್ತವಾಗಿರಲಿಲ್ಲ ಎಂಬ ಬಗ್ಗೆ ಯಾವುದೇ ಸಾಕ್ಷಾಧಾರಗಳಿರುವುದಿಲ್ಲ. | Nothing in this argument relates directly to the charges against him. |

| | |
|---|---|
| (ii).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಔಷಧಿ ಖರೀದಿ ಆದೇಶವನ್ನು ಜಿಲ್ಲಾ ಪಂಚಾಯಿತಿಯ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿಯು ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಬೀದರ್ ಇವರ ಶಿಫಾರಸ್ಸಿನ ಮೇಲೆ ಅನುಮೋದಿಸಿದೆ:- ಆಪಾದಿತ ಅಧಿಕಾರಿಯವರು ಔಷಧಿ ಖರೀದಿಯ ಬಗ್ಗೆ ಯಾವುದೇ ಶಿಫಾರಸ್ಸು ಮಾಡಿರುವುದಿಲ್ಲ. ಔಷಧಿಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಬೀದರ್ ಇವರ ಶಿಫಾರಸ್ಸಿನ ಮೇಲೆ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯಲ್ಲಿ ದಿ:೨೫.೦೨.೦೨ರಂದು ತೆಗೆದುಕೊಂಡು ನಿರ್ಣಯದನ್ವಯ ಅವರು ಖರೀದಿಸಿರುತ್ತಾರೆ. ಶಿಫಾರಸ್ಸು ಹಾಗೂ ಖರೀದಿಯಲ್ಲಿ ಆಪಾದಿತ ಅಧಿಕಾರಿಯವರ ಪಾತ್ರ ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | As in para 6(1)(vi). |
| (iii).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ನಾಲ್ಕನೇ ಆರೋಪದ ಬಗ್ಗೆ ಆಪಾದಿತ ಅಧಿಕಾರಿಯ ಸಮರ್ಥನೆ:- Amecrylate A bio adhesive ಇದನ್ನು ಖರೀದಿಸುವ ಪೂರ್ವದಲ್ಲಿ ದಿ:೨೫.೦೨.೦೨ರ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯ ಸಭೆಯಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಅನುದಾನದ ಬಗ್ಗೆ ಆರ್ಥಿಕ ಇಲಾಖೆಯಿಂದ ಅನುಮೋದನೆ ಪಡೆಯಲಾಗಿದೆ. ಆಡಳಿತಾತ್ಮಕ ಅನುಮೋದನೆಯು ದೊರೆತ ನಂತರ ಔಷಧಿಯನ್ನು ಖರೀದಿಸಿರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಯಾವುದೇ ನಷ್ಟ ಉಂಟು ಮಾಡಿರುವುದಿಲ್ಲ. ಖರೀದಿಸಿರುವ ಔಷಧಿಗಳನ್ನು ಸಾರ್ವಜನಿಕರಿಗೆ ಬಳಸಲಾಗಿದೆ. ಆದ್ದರಿಂದ ೪ನೇ ಆರೋಪವು ಸಾಬೀತಾಗಿಲ್ಲವೆಂದು ನಿರ್ಣಯಿಸಲು ಕೋರಲಾಗಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | Repetitive. Replied in pre paras. |
| (iv).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ನಾಲ್ಕನೇ ಆರೋಪವು ಆಪಾದಿತರ ಕಾರ್ಯ ಹಂಚಿಕೆಗೆ ಒಳಪಡುವುದಿಲ್ಲ:- Amecrylate a bio adhesive ಇದನ್ನು ಖರೀದಿಸುವ ಶಿಫಾರಸ್ಸನ್ನು ಆಪಾದಿತ ಅಧಿಕಾರಿಯವರು ಮಾಡಿರುವುದಿಲ್ಲ. ವಿಚಾರಣೆಯಲ್ಲಿ ದಾಖಲಾಗಿರುವ ನಿಶಾನೆ ಪಿ-೨ರ ಕಡತದಲ್ಲಿ ೧ನೇ ಆಪಾದಿತರ ಶಿಫಾರಸ್ಸು ಇರುವುದಿಲ್ಲ. ಈ ರೀತಿ ಶಿಫಾರಸ್ಸು ಮಾಡುವುದು ಆಪಾದಿತ ಕಾರ್ಯಹಂಚಿಕೆಯಲ್ಲಿ ಬರುವುದಿಲ್ಲ. ಆದ್ದರಿಂದ ೪ನೇ ಆರೋಪವು ಸಾಬೀತಾಗಿಲ್ಲವೆಂದು ನಿರ್ಣಯಿಸಲು ಕೋರಲಾಗಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | Repetitive. Replied in pre paras. |
| (5)(i).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಐದನೇ ಆರೋಪದ ಬಗ್ಗೆ ನಮೂದಿಸಿರುವ ಅಂಶಗಳು ಅಂದರೆ, ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಆಪಾದಿತರು ರಾಜ್ಯ ಸರ್ಕಾರಕ್ಕೆ ಮರು ಪಾವತಿಯಾಗಲು ಅನುಮತಿಸಲ್ಪಟ್ಟಿರುವ ಪಟ್ಟಿಯನ್ನು ಹೊಂದಿರುವುದಿಲ್ಲ- ನಿಶಾನೆ ಪಿ-೧ ತನಿಖಾ ವರದಿಯ ೨ನೇ ಪುಟದಲ್ಲಿ ದಿ:೨೫.೦೨.೦೨ರಂದು ನಡೆದ ಶಿಕ್ಷಣ ಹಾಗೂ ಆರೋಗ್ಯ ಸಮಿತಿಯ ಸ್ಥಾಯಿ ಸಮಿತಿಯಲ್ಲಿ ಪುಟ ೯,೪(೩)ರಲ್ಲಿ Amecryolate a Bio adhesive ೦-೫ ml. ಔಷಧಿಯನ್ನು M/s Karnataka State Industrial Supplies & Marketing Co-operative Federation, Bangalore ಮುಖಾಂತರ ಖರೀದಿಸಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು, ಬೀದರ್ ಇವರ ಕೋರಿಕೆಯ ಮೇರೆಗೆ ಮಂಜೂರಾತಿ ನೀಡಿತ್ತು ಎಂದು ನಮೂದಿಸಿರುತ್ತಾರೆ. ಆದ್ದರಿಂದ ಆಪಾದಿತ ಅಧಿಕಾರಿಯು ಖರೀದಿಗಾಗಿ ಶಿಫಾರಸ್ಸು ಮಾಡಿರುವುದಿಲ್ಲ. ಆದ್ದರಿಂದ ಮರು ಪಾವತಿಯಾಗಲು ಅನುಮತಿಸಿರುವ ಪಟ್ಟಿಯನ್ನು ಅವರು ಮೇಲಾಧಿಕಾರಿಗಳ ಗಮನಕ್ಕೆ ತರುವ ಪ್ರಶ್ನೆ ಉದ್ಭವಿಸುವುದಿಲ್ಲ. ನಿಶಾನೆ ಪಿ-೫ರಲ್ಲಿ ಔಷಧಿಗಳ ಪಟ್ಟಿಯು ವಿಚಾರಣೆಯಲ್ಲಿ ಹಾಜರುಪಡಿಸಲಾಗಿದೆ. ಸದರಿ ನಿಶಾನೆ ಪಿ-೫ ಆಪಾದಿತರ ಕಛೇರಿಯಲ್ಲಿ ಸ್ವೀಕೃತವಾಗಿರುವುದಿಲ್ಲ. ಇದು ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಬೀದರ್ ಇವರ ಕಛೇರಿಯಲ್ಲಿ ಸ್ವೀಕೃತವಾಗಿದೆ. ಆದ್ದರಿಂದ ಆಪಾದಿತರಿಗೆ ಈ ಬಗ್ಗೆ ಮಾಹಿತಿ ಇರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ವಿಶ್ಲೇಷಣೆ ಇರುವುದಿಲ್ಲ. | Repetitive. Replied in pre paras. |
| (ii).**ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಕೇಂದ್ರ ಪುರಸ್ಕೃತ ಯೋಜನೆಯ ಮಾಹಿತಿಯನ್ನು ಒಂದನೇ ಆಪಾದಿತರಿಗೆ ಮಂಡಿಸಿರುವುದಿಲ್ಲ:-** ಖರೀದಿಗೆ ಸಂಬಂಧಪಟ್ಟ ಕಡತದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮದಲ್ಲಿ ಖರೀದಿಸುವ ಔಷಧಿಗಳ ಪಟ್ಟಿಯನ್ನಾಗಲಿ, ಅಥವಾ ಯೋಜನೆಯ ರೂಪುರೇಷೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಬೀದರ್ ಮಂಡಿಸಿರುವುದಿಲ್ಲ. ಇಲಾಖೆಯ ಆಂತರಿಕ ಸುತ್ತೋಲೆ, ಜ್ಞಾಪನ, ಯೋಜನೆಗಳ ಮಾಹಿತಿಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಬೀದರ್ ಇವರು ಮಂಡಿಸಿದಲ್ಲಿ ಮಾತ್ರ ಒಂದನೇ ಆಪಾದಿತರಿಗೆ ಅವುಗಳನ್ನು ಪರಿಶೀಲಿಸಲು ಅವಕಾಶವಿದೆ. ಆದ್ದರಿಂದ ಐದನೇ ಆರೋಪವು ಆಪಾದಿತರ ಕಾರ್ಯಹಂಚಿಕೆಗೆ ಒಳಪಡುವುದಿಲ್ಲ ಎಂದು ತಿಳಿಸಲಾಗಿದೆ ಎಂದು ಮಂಡಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | Repetitive. Replied in pre paras. |
| (iii).**ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಐದನೇ ಆರೋಪದ ಬಗ್ಗೆ ಆಪಾದಿತ ಅಧಿಕಾರಿಯವರ ಸಮರ್ಥನೆ:-** ಜಿಲ್ಲಾ ಪಂಚಾಯಿತಿಯ ಕೋರಿಕೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಿ ಅನುದಾನ ಲಭ್ಯವಿರುವ ಬಗ್ಗೆ ಮತ್ತು ಮರು ಹೊಂದಾಣಿಕೆ ಆದೇಶ ನಿಶಾನೆ ಪಿ-೩ರ ಆಧಾರದ ಮೇಲೆ ಖರೀದಿ ಪ್ರಕ್ರಿಯೆಯನ್ನು ಜಿಲ್ಲಾ ಆರೋಗ್ಯ ಅಧಿಕಾರಿಗಳು ನಿರ್ವಹಿಸಿರುತ್ತಾರೆ. ಆರ್ಥಿಕ ಇಲಾಖೆಯು ಈ ಪ್ರಕರಣದಲ್ಲಿ ಒಪ್ಪಿಗೆ ನೀಡಿದೆ. ಆದುದರಿಂದ ಈ ಆರೋಪಕ್ಕೆ ಆಪಾದಿತನಾದ ನಾನು ಹೊಣೆಗಾರನಲ್ಲ ಎಂದು ತಿಳಿಸಲಾಗಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | Repetitive. Replied in pre paras. |

| | |
|---|---|
| **(6)(i).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಆರನೇ ಆರೋಪದ ಬಗ್ಗೆ ನಮೂದಿಸಿರುವ ಅಂಶ ಗಳು ಅಂದರೆ, ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಆರನೇ ಆರೋಪದ ಬಗ್ಗೆ ಸಾಕ್ಷ್ಯಾಧಾರಗಳ ವಿಶ್ಲೇಷಣೆ:-** ಶಿಸ್ತು ಪ್ರಾಧಿಕಾರಿಯ ಪರ ಸಾಕ್ಷಿದಾರರಾದ ಡಾ:ಜೆ.ಎಸ್.ರಾಜು ಇವರು ಈ ಬಗ್ಗೆ ತಮ್ಮ ಸಾಕ್ಷಿ ಹೇಳಿಕೆಯಲ್ಲಿ ಪಿ-೩ರಲ್ಲಿ ೩೧.೩.೦೨ ಎಂದು ಬರೆದಿದ್ದು, ಅಂದು ರವಿವಾರವಿದ್ದುದರಿಂದ ಆ ದಿನ ೩೦.೦೩.೦೨ ಆಗಿರಬಹುದು ಎಂದು ಹೇಳಲು ಬರುವುದಿಲ್ಲ ಎಂದು ಸಾಕ್ಷಿ ನುಡಿದಿದ್ದಾರೆ. ದಿ:೩೧.೦೩.೦೨ ರವಿವಾರ ಆಗಿದೆ. ಇದು ಸಾರ್ವತ್ರಿಕ ರಜಾ ದಿನವಾಗಿದ್ದು, ಸಚಿವಾಲಯವು ಕಾರ್ಯನಿರ್ವಹಿಸುವುದಿಲ್ಲ. ನಿಶಾನೆ ಪಿ-೩ರ ದಿನಾಂಕದ ಬಗ್ಗೆ ಸಾಬೀತು ಪಡಿಸಬೇಕಾದಲ್ಲಿ ಅದನ್ನು ಹೊರಡಿಸಿರುವ ಅಧಿಕಾರಿಗಳು ಸಾಕ್ಷಿ ನುಡಿಯಬೇಕಾಗಿದೆ. ಈ ಕಾರಣದಿಂದ ನಿಶಾನೆ ಪಿ-೩ ದಿ:೩೦.೦೩.೦೨ ಆಗಿದ್ದು ಅದೇ ದಿನ ಮತ್ತು ಮಾರನೇ ದಿನ ದಿ:೩೧.೦೩.೦೨ರಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ  ಅಧಿಕಾರಿಗಳು ಸರಬರಾಜು ಆದೇಶ ಹೊರಡಿಸಿರುತ್ತಾರೆ ಎಂದು ತಿಳಿಸಿರುತ್ತಾರೆ. ವಿಚಾರಣಾ ವರದಿಯ ಪುಟ ೧೩ರಲ್ಲಿ ಈ ಬಗ್ಗೆ ವಿಚಾರಣಾಧಿಕಾರಿಯವರು ಕೈತಪ್ಪಿ ಹಿಂದಿನ ದಿನಾಂಕ, ಅದನ್ನು  ಉಪಯೋಗಿಸಿದ್ದರಿಂದ, ಬರೆಯಬಹುದೇ ಹೊರತು ಭವಿಷ್ಯತ್ತಿನ ಅಥವಾ ಮುಂದಿನ ದಿನಾಂಕವನ್ನು ಅದೂ ರಜೆಯ ದಿನಾಂಕವನ್ನು ಬರೆಯುವುದು ಸಹಜವಾದ ಕ್ರಿಯೆ ಅಲ್ಲ ಎಂದು ನಿರ್ಣಯಿಸಿರುತ್ತಾರೆ. ದಿ:೩೧.೦೩.೦೨ ರಜೆಯ ದಿನಾಂಕವಾಗಿದ್ದು, ಆ ದಿನ ಕಛೇರಿಯು ಕರ್ತವ್ಯ ನಿರ್ವಹಿಸುವುದಿಲ್ಲ. ಇದು ಅಲ್ಲದೆ ಕೈತಪ್ಪಿನಿಂದ ಬರೆದಿರುವುದನ್ನು ಕೇವಲ ಹಿಂದಿನ ದಿನಾಂಕಕಷ್ಟೇ ಸೀಮಿತಗೊಳಿಸಲು ಯಾವುದೇ ಕಾರಣಗಳಿರುವುದಿಲ್ಲ. | This has been considered by Enquiry Officer and rejected. |
| **(ii).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಆಪಾದಿತ ಅಧಿಕಾರಿಯವರು ಖರೀದಿಗೆ ಯಾವುದೇ ಶಿಫಾರಸ್ಸನ್ನು ಮಾಡಿರುವುದಿಲ್ಲ:-** ಖರೀದಿಯ ಬಗ್ಗೆ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯು ದಿ:೨೫.೦೨.೦೨ರಂದು ಅನುಮೋದನೆ ನೀಡಿರುವುದರಿಂದ ಆಪಾದಿತ ಅಧಿಕಾರಿಯು ದಿ:೨೮.೦೩.೦೨ರಂದು ಖರೀದಿಯ ಬಗ್ಗೆ ಶಿಫಾರಸ್ಸು ಮಾಡುವ ಅಗತ್ಯತೆ ಇರುವುದಿಲ್ಲ. ಆದ್ದರಿಂದ ಈ ಆರೋಪವು ಸಾಬೀತಾಗಿರುವುದಿಲ್ಲವೆಂದು ಪರಿಗಣಿಸಲು ಕೋರಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | The recommendation of the appellant means his role at the Zilla Panchayat after receiving the proposal from Health Department. Therefore, he cannot take refuge on technical grounds. |
| **(iii).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಆರನೇ ಆರೋಪದ ಬಗ್ಗೆ ಆಪಾದಿತರ ಸಮರ್ಥನೆ:-** ಜಿಲ್ಲಾ ಪಂಚಾಯಿತಿಗಳಲ್ಲಿ ಸಾಧಾರಣವಾಗಿ ಆರ್ಥಿಕ ವರ್ಷದ ಅಂತ್ಯದಲ್ಲಿ ಸರಬರಾಜುದಾರರು ಸ್ವತ: ಆಸಕ್ತಿ ವಹಿಸಿ ಖರೀದಿ ಪ್ರಕ್ರಿಯೆಯನ್ನು ಮಾರ್ಚ್ ೩೧ರವರೆಗೆ ಪೂರ್ಣಗೊಳಿಸುತ್ತಾರೆ. ಆ ಸಂದರ್ಭದಲ್ಲಿ ಇಲಾಖೆಯ ನಡವಳಿಕೆಗಳು ಪೂರ್ಣವಾಗಿ ತಿಳಿದ ನಂತರವೇ ಸರಬರಾಜು ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಸರಬರಾಜು ಆದೇಶವನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಸ್ವತ: ನಿರ್ವಹಿಸಿರುವುದರಿಂದ ಹಾಗೂ ಆಪಾದಿತ ಅಧಿಕಾರಿಯು ಖರೀದಿಯ ಬಗ್ಗೆ ಯಾವುದೇ ಶಿಫಾರಸ್ಸು ಮಾಡದೇ ಇರುವುದರಿಂದ ಮೇಲಿನ ಈ ಆರೋಪ ನಿರಾಧಾರವಾದದ್ದು. ಆದ್ದರಿಂದ ಆರೋಪ ಸಾಬೀತಾಗಿಲ್ಲ ಎಂದು ಪರಿಗಣಿಸಿ ವರದಿ ನೀಡಲು ಕೋರಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | Repetitive. Replied in pre paras. |
| **7(ಅ):-ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಏಳನೇ ಆರೋಪದ ಬಗ್ಗೆ ನಮೂದಿಸಿರುವ ಅಂಶಗಳು ಅಂದರೆ, ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಏಳನೇ ಆರೋಪದ ಬಗ್ಗೆ ಸಾಕ್ಷ್ಯಾಧಾರಗಳ ವಿಶ್ಲೇಷಣೆ:-** ವಿಚಾರಣೆಯಲ್ಲಿ ದಾಖಲಾದ ಯಾವುದೇ ದಸ್ತಾವೇಜು ಹಾಗೂ ಸಾಕ್ಷಿ ಹೇಳಿಕೆಯಲ್ಲಿ ಆಪಾದಿತ ಅಧಿಕಾರಿಯು ಪಂಚಾಯತ್ ರಾಜ್ ಅಧಿನಿಯಮದ ೧೯೬ನೇ ಪ್ರಕರಣದ (೪) ಹಾಗೂ (೫)ನೇ ಉಪ ಪ್ರಕರಣಗಳನ್ನು ಉಲ್ಲಂಘಿಸಿರುವ ಬಗ್ಗೆ ಸಾಕ್ಷಿ ಹೇಳಿಕೆ ದಾಖಲಾಗಿರುವುದಿಲ್ಲ. ಆದ್ದರಿಂದ ಈ ಆರೋಪ ಸಾಬೀತಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ.<br>ಆ)ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಸುತ್ತೋಲೆ ಸಂ:ಗ್ರಾಅಪ ೨೪೨ ಜಿಪಸ ೨೦೦೦, ದಿ:೧೦.೦೮.೨೦೦೦ರನ್ವಯ ಕ್ರಮ ಜರುಗಿಸಲಾಗಿದೆ:- ಸುತ್ತೋಲೆ ಸಂ:ಗ್ರಾಅಪ ೨೪೨ ಜಿಪಸ ೨೦೦೦ದಲ್ಲಿ ಖರೀದಿ ಸಮಿತಿಗಳನ್ನು ರದ್ದುಪಡಿಸಲಾಗಿದ್ದು, ಖರೀದಿಯ ಕಾರ್ಯ ವಿಧಾನಗಳನ್ನು ನಿಗದಿಪಡಿಸಲಾಗಿದೆ. ಸದರಿ ಸುತ್ತೋಲೆಯಲ್ಲಿ ನೀಡಿರುವ ಮಾರ್ಗಸೂಚಿಗಳನ್ವಯ ಕಾರ್ಯನಿರ್ವಹಿಸಲಾಗಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | The Enquiry Report has elaborately dealt with all these issues the report need not necessarily be a verbatum to the statement of the appellant. |
| **(ಇ).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, ೧೯೯೯ ಇದು ನಂತರದ ಅಧಿನಿಯಮವಾಗಿದೆ:-** ಆರೋಪದಲ್ಲಿ ನಮೂದಿಸಿರುವ ಉಪನಿಬಂಧಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, ೧೯೯೯ರ ಉಪಬಂಧಗಳೊಡನೆ ಪರಿಗಣಿಸಬೇಕಾಗಿದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, ೧೯೯೯ರಲ್ಲಿ ಟೆಂಡರ್ ಬುಲೆಟಿನ್ ಅಧಿಕಾರಿ, ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಇವರನ್ನು ಯಾವುದೇ ಸಂಗ್ರಹಣೆಯ ಬಗ್ಗೆ ಜವಾಬ್ದಾರರನ್ನಾಗಿ ಮಾಡಲಾಗಿದೆ. ಆಪಾದಿತರು ಖರೀದಿಯ ಬಗ್ಗೆ ಟೆಂಡರ್ ಬುಲೆಟಿನ್ ಹಾಗೂ ಟೆಂಡರ್‌ನ್ನು ಅಂಗೀಕರಿಸಿರುವ ಪ್ರಾಧಿಕಾರಿಯಾಗಿರುವುದಿಲ್ಲ. ಈ ಎರಡೂ ಕಾರ್ಯಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಬೀದರ್ ಇವರು ನಿರ್ವಹಿಸಿರುತ್ತಾರೆ. ಆದ್ದರಿಂದ | The appellant is arguing about the transferrancy and procurement in purchases. He states that these two are the responsibility of the concerned departmental officers. But he has failed to properly scrutinize the |

| | |
|---|---|
| ಈ ಬಗ್ಗೆ ಮೇಲಾಧಿಕಾರಿಗಳಿಗೆ ಮಾಹಿತಿಗಳನ್ನು ಒದಗಿಸುವುದು ಅವರ ಕರ್ತವ್ಯವಾಗಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ. | proposal brought up by the departments. |
| **(ಈ).ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಆಪಾದಿತ ಅಧಿಕಾರಿಯು ತಮ್ಮ ಕರ್ತವ್ಯಗಳನ್ನು ನಿಯಮಾನುಸಾರ ನಿರ್ವಹಿಸಿರುತ್ತಾರೆ:-** ಆಪಾದಿತ ಅಧಿಕಾರಿಯವರು ಯಾವುದೇ ಖರೀದಿಯ ಬಗ್ಗೆ ಜಿಲ್ಲಾ ಪಂಚಾಯತಿಯ ಸಕ್ಷಮ ಪ್ರಾಧಿಕಾರಿಯಿಂದ ಆಡಳಿತಾತ್ಮಕ ಅನುಮೋದನೆ ದೊರೆತಿದೆಯೇ? ಹಾಗೂ ಆಯವ್ಯಯದಲ್ಲಿ ಇದಕ್ಕೆ ಹಣ ಒದಗಿಸಲಾಗಿದೆಯೇ? ಎಂಬ ಅಂಶಗಳನ್ನು ಪರಿಶೀಲಿಸುವ ಕಾರ್ಯಹಂಚಿಕೆಯನ್ನು ಹೊಂದಿರುತ್ತಾರೆ ಅದರನ್ವಯ ಔಷಧಿ ಖರೀದಿಗಾಗಿ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯು ದಿ:೨೫.೦೨.೦೨ರಂದು ಅನುಮೋದನೆ ನೀಡಿದ್ದು, ಆರ್ಥಿಕ ಇಲಾಖೆಯು ಖರೀದಿಯ ಬಗ್ಗೆ ನಿಶಾನೆ ಪಿ-೩ರಲ್ಲಿ ಅನುಮತಿ ನೀಡಿದೆ. ಹಾಗೂ ೨೦೦೧-೦೨ನೇ ಸಾಲಿನಲ್ಲಿ ಉಳಿತಾಯದ ಹಣದಿಂದ ಖರೀದಿಸುವಂತೆ ನಿರ್ದೇಶಿಸಿದೆ. ಈ ಅಂಶಗಳನ್ನು ೧ನೇ ಆಪಾದಿತ ಅಧಿಕಾರಿಯವರು ಪರಿಗಣಿಸಿರುತ್ತಾರೆ. ದಿ:೩೧.೦೩.೦೨ರಂದು ಬಿಲ್ಲನ್ನು ಮೇಲು ರುಜು ಮಾಡುವಾಗ ಆಪಾದಿತ ಅಧಿಕಾರಿ ಅವರು ನಿರ್ವಹಿಸಿರುವ ಎಲ್ಲಾ ಕೆಲಸಗಳನ್ನು ಒಟ್ಟಾರೆಯಾಗಿ ಪರಿಗಣಿಸಿದಲ್ಲಿ ಪ್ರಸ್ತುತ ಪ್ರಕರಣದಲ್ಲಿ ಅವರಿಂದ ಯಾವುದೇ ನಿರ್ಲಕ್ಷತೆ ಇಲ್ಲ ಎನ್ನುವುದು ಸಾಬೀತಾಗುವುದು. ಈ ಹಿನ್ನೆಲೆಯಲ್ಲಿ ಏಳನೇ ಆರೋಪವು ಸಾಬೀತಾಗಿಲ್ಲವೆಂದು ಪರಿಗಣಿಸಿ ವರದಿ ನೀಡಲು ಕೋರಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ಉಲ್ಲೇಖ, ವಿಶ್ಲೇಷಣೆ ಹಾಗೂ ನಿರ್ಣಯವಿರುವುದಿಲ್ಲ.<br>ದಿ:೩೦.೦೩.೦೨ರಂದು ಬಿಲ್ಲನ್ನು ಮೇಜು ರುಜು ಮಾಡುವಾಗ ಒಂದೇ ಆಡಳಿತಾತ್ಮಕ ಹಾಗೂ ಸರಬರಾಜು ಆದೇಶ ಮತ್ತು ಒಟ್ಟು ಮೊತ್ತದ ಒಂದೇ ಬಿಲ್‌ಗೆ ಸಹಿ ಮಾಡಲಾಗಿದೆ. ಬಿಲ್ ಮೇಲು ರುಜು ಮಾಡುವ ಕಾರ್ಯವು ಮುಖ್ಯ ಲೆಕ್ಕಾಧಿಕಾರಿಯೇ ಕಡ್ಡಾಯವಾಗಿ ನಿರ್ವಹಿಸಲೇ ಬೇಕಾದ ಕಾರ್ಯಹಂಚಿಕೆಯಾಗಿರುವುದಿಲ್ಲ. ಹಿಂದಿನಿಂದ ನಡೆದುಕೊಂಡು ಬಂದಂತೆ ಅದನ್ನು ನಿರ್ವಹಿಸಿದೆ. | In this para the appellant blames other officers which cannot be considered. Further his argument that the Chief Accounts Officer need not always compulsorily counter sign the bills and that he was merely signing the bills as was the practice cannot be accepted. |
| **೭.ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಎಲ್ಲಾ ಏಳು ಆರೋಪಗಳ ಬಗ್ಗೆ:-(೧)** ಈ ಪ್ರಕರಣದಲ್ಲಿ ಜಿಲ್ಲಾ ಪಂಚಾಯತ ಸ್ಥಾಯಿ ಸಮಿತಿಯ ಅನುಮೋದನೆ ಮೇರೆಗೆ ಸರ್ಕಾರದ ಸಂಸ್ಥೆಯ ಮೂಲಕ ಔಷಧಿ ಖರೀದಿ ಮಾಡಲಾಗಿದ್ದು, ಔಷಧಿ ಸಂಪೂರ್ಣವಾಗಿ ಸರಬರಾಜು ಆದ ನಂತರ ಗುಣಮಟ್ಟ ಪರಿಶೀಲಿಸಿ ಹಣ ಪಾವತಿ ಮಾಡಿರುವ ಹಿನ್ನೆಲೆಯಲ್ಲಿ ಯಾವುದೇ ಹಣ ದುರುಪಯೋಗ ಮತ್ತು ವಂಚನೆಯಾಗಿಲ್ಲವೆಂದು ವಿಚಾರಣಾಧಿಕಾರಿಯವರ ಗಮನಕ್ಕೆ ತರಲಾಗಿದೆ ಎಂದು ತಿಳಿಸಿರುತ್ತಾರೆ. ಈ ಬಗ್ಗೆ ವಿಚಾರಣಾ ವರದಿಯ ಪುಟ ೧೦ & ೧೧ರಲ್ಲಿ ಉಲ್ಲೇಖಿಸಲಾಗಿದೆ. ಹಾಗೂ ಸ್ಥಾಯೀ ಸಮಿತಿಯ ಅನುಮೋದನೆ ಇರುವುದನ್ನು ವಿಚಾರಣಾಧಿಕಾರಿಯವರು ಒಪ್ಪಿರುತ್ತಾರೆ. ಸಕ್ಷಮ ಪ್ರಾಧಿಕಾರಿಯಿಂದ ಅನುಮೋದನೆ ದೊರೆತಿರುವುದರಿಂದ ಆರೋಪ ಸಾಬೀತಾಗುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯು ದೋಷಪೂರಿತವಾಗಿದೆ ಎಂದು ಪರಿಗಣಿಸಲು ಕೋರಿದೆ. | Already explained in pre paras. |
| **8.ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಖರೀದಿಯ ಬಗ್ಗೆ ಸರ್ಕಾರದ ಅನುಮತಿ ಇರುವುದರಿಂದ ಯಾವುದೇ ದುರ್ನಡತೆ ಆಗಿರುವುದಿಲ್ಲ:-** ನಿಶಾನೆ ಪಿ-೩ರಲ್ಲಿ ಸರ್ಕಾರದ ಆರ್ಥಿಕ ಇಲಾಖೆಯು Amecrylate a bio adhesive ಇದನ್ನು ಖರೀದಿಸಲು ಹಾಗೂ ಇದರ ಸಂಬಂಧ ಹಣ ವಿನಿಯೋಗಿಸಲು ಅನುಮತಿ ನೀಡಿದೆ. ಈ ರೀತಿ ಸರ್ಕಾರವೇ ಅನುಮೋದನೆ ನೀಡಿರುವುದರಿಂದ ಮಾತ್ರ ಔಷಧಿಗಳನ್ನು ಖರೀದಿಸಲಾಗಿದೆ. ಸರ್ಕಾರವು ಅನುಮೋದನೆ ನೀಡದಿದ್ದಲ್ಲಿ ಔಷಧಿಯನ್ನು ಖರೀದಿಸುವ ಪ್ರಶ್ನೆ ಉದ್ಭವಿಸುತ್ತಿರಲಿಲ್ಲ. ೨೦೦೧-೦೨ನೇ ಸಾಲಿನಲ್ಲಿ ಒದಗಿಸಿರುವ ಒಟ್ಟಾರೆ ಅಯವ್ಯಯ ಉಳಿತಾಯದಲ್ಲಿ ಖರೀದಿಸಲು ಅನುಮತಿ ನೀಡಿರುವುದರಿಂದ ದಿ:೩೧.೦೩.೦೨ರೊಳಗೆ ಖರೀದಿಸುವುದು ಅನಿವಾರ್ಯವಾಗಿತ್ತು. ಆದ್ದರಿಂದ ಖರೀದಿಯಲ್ಲಿ ಯಾವುದೇ ದುರ್ನಡತೆಯಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಆದರೆ ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ವಿಶ್ಲೇಷಣೆ ಇರುವುದಿಲ್ಲ. | Repetitive. Already explained in pre paras. |
| **9.ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಸದ್ಭಾವನೆಯಿಂದ ತೆಗೆದುಕೊಂಡಿರುವ ಕ್ರಮಗಳು ದುರ್ನಡತೆ ಆಗುವುದಿಲ್ಲ:-** Amecrylate a bio adhesive ಇದನ್ನು ಖರೀದಿಸುವ ನಿರ್ಣಯವನ್ನು ಕುಟುಂಬ ಯೋಜನಾ ಕ್ರಮಗಳನ್ನು ಅನುಸರಿಸುವ ಫಲಾನುಭವಿಗಳ ಆರೋಗ್ಯದ ದೃಷ್ಟಿಯಿಂದ ಜಿಲ್ಲಾ ಪಂಚಾಯತ್ ತೆಗೆದುಕೊಂಡಿದೆ. ಈ ಕ್ರಮಗಳಿಂದ ಸಾರ್ವಜನಿಕರಿಗೆ ಉಪಯೋಗವಾಗಿದೆ. ಅಧಿಕಾರಿಗಳೂ ಈ ಔಷಧಿಯನ್ನು ಖರೀದಿಸಿ ಹಣ ಪಾವತಿ ಮಾಡಿರುವುದು ಸಾಬೀತಾಗಿದೆ. ಸದ್ಭಾವನೆಯಿಂದ ತೆಗೆದುಕೊಂಡ ಕ್ರಮಗಳಿಗೆ ರಕ್ಷಣೆ ಇರುವುದರಿಂದ ಇದರಲ್ಲಿ ನ್ಯೂನತೆಗಳಿದ್ದಲ್ಲಿ ಇದನ್ನು ಆಡಿಟ್ ಆಕ್ಷೇಪಣೆಯ ಮಾದರಿಯಲ್ಲಿ ಪರಿಗಣಿಸಿ ಮುಕ್ತಾಯಗೊಳಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ. ಆದರೆ ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ವಿಶ್ಲೇಷಣೆ ಇರುವುದಿಲ್ಲ. | Not related with the charge. A deliberate and negligent act cannot be considered as an act done in good faith. |
| **10.ಆಪಾದಿತರು ತಮ್ಮ ಲಿಖಿತ ವಾದದಲ್ಲಿ ಎಲ್ಲಾ ಏಳು ಆರೋಪಗಳಲ್ಲಿ ಏಳನೇ ಆರೋಪವು ಮಾತ್ರ ಆಪಾದಿತರ ಕಾರ್ಯಹಂಚಿಕೆಗೆ ಬರುತ್ತದೆ:-** ಏಳು ಆರೋಪಗಳ ಪೈಕಿ ಖರೀದಿಯ ಬಗ್ಗೆ ಶಿಫಾರಸ್ಸು ಖರೀದಿ ಪ್ರಕ್ರಿಯೆಯಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳು ಟೆಂಡರ್ ಆಹ್ವಾನಿಸುವುದು, ಅಂಗೀಕರಿಸುವುದು ಕೇಂದ್ರ ಸರ್ಕಾರದಿಂದ ಅನುಮೋದಿತ ಪಟ್ಟಿಯೊಂದಿಗೆ ತಾಳೆ ನೋಡುವುದು ಇದಕ್ಕೆ ಸಂಬಂಧಪಟ್ಟ ಎಲ್ಲಾ ಆರೋಪಗಳು ಆಪಾದಿತ ಅಧಿಕಾರಿಯ ಕಾರ್ಯಹಂಚಿಕೆಗೆ ಒಳಪಡುವುದಿಲ್ಲ. ನೀಡಿರುವ ಪ್ರತಿರಕ್ಷಣಾ ಹೇಳಿಕೆಗಳನ್ನು ಪರಿಗಣಿಸಿ ಎಲ್ಲಾ | The appellant tries to argue that the misdeeds alleged are out of his functional area which cannot be considered since he was at the |

| | |
|---|---|
| ಏಳು ಆರೋಪಗಳು ಸಾಬೀತಾಗಿಲ್ಲವೆಂದು ಪರಿಗಣಿಸಲು ಕೋರಿದೆ ಎಂದು ತಿಳಿಸಿರುತ್ತಾರೆ. ಆದರೆ, ಈ ಬಗ್ಗೆ ವಿಚಾರಣಾ ವರದಿಯಲ್ಲಿ ಯಾವುದೇ ವಿಶ್ಲೇಷಣೆ ಇರುವುದಿಲ್ಲ. | scrutinizing position as the head of the Accounts-wing. |
| 11.**ವಿಧಿಸಿರುವ ದಂಡನೆಯು ಸಾಬೀತಾಗಿದೆ ಎಂದು ಪರಿಗಣಿಸಲಾದ ದುರ್ನಡತೆಗೆ ಅನುರೂಪವಾಗಿರುವುದಿಲ್ಲ:-** ಅಪೀಲುದಾರರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ. ಅಪೀಲುದಾರರು ಜಂಟಿ ನಿರ್ದೇಶಕರ ಹುದ್ದೆಯ ಬಡ್ತಿಗೆ ಅರ್ಹತೆ ಹೊಂದಿದ್ದು, ದಂಡನಾದೇಶವು ಜಾರಿಯಲ್ಲಿರುವವರೆಗೆ ಅಂದರೆ ಮುಂದಿನ ಮೂರುವರೆ ವರ್ಷಗಳವರೆಗೆ ಬಡ್ತಿ ಪಡೆಯಲು ಅನರ್ಹರಾಗುವರು. ಇದರಿಂದ, (ಎ) ಮುಂದಿನ ಮೂರು ವರ್ಷಗಳವರೆಗೆ ಸಂಚಿತ ಪರಿಣಾಮ ಸಹಿತವಾಗಿ ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವ; (ಬಿ)ಮುಂದಿನ ಮೂರು ವರ್ಷಗಳವರೆಗೆ ಬಡ್ತಿಯನ್ನು (ಪದೋನ್ನತಿ) ತಡೆಹಿಡಿಯುವ ದಂಡನೆಯನ್ನು ವಿಧಿಸಿದಂತಾಗಿದೆ.<br>ಅಪೀಲುದಾರರು ಯಾವುದೆ ದುರ್ನಡತೆಯನ್ನು ಎಸಗಿರುವುದಿಲ್ಲ. Amcrylate and Bio-adhesive ರಾಸಾಯನಿಕ ಖರೀದಿಯಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿಲ್ಲ, ಅನುಮೋದನೆ ನೀಡಿರುವುದಿಲ್ಲ. ಆದರೆ ವರ್ಷಾಂತ್ಯಕ್ಕೆ ಅಂದರೆ ದಿ:೩೧.೦೩.೦೨ರಂದು ಬಂದಿರುವ ಬಿಲ್ಲನ್ನು ಮೇಲು ರುಜು ಮಾಡಿರುತ್ತಾರೆ. ಸದರಿ ಬಿಲ್ಲಿನಲ್ಲಿ ಪ್ರತ್ಯೇಕವಾದ ಆದೇಶಗಳಿರಲಿಲ್ಲ. ಒಂದೇ ಆದೇಶವಿದ್ದುದರಿಂದ ನಿಯಮಗಳನ್ನು ಪಾಲಿಸದಿರುವ ಬಗ್ಗೆ ತನಿಖೆ ಮಾಡುವ ಪ್ರಶ್ನೆ ಉದ್ಭವಿಸಿರಲಿಲ್ಲ. ಅಪೀಲುದಾರರ ಮೇಲೆ ಮಾಡಿರುವ ೧ ರಿಂದ ೬ರವರೆಗಿನ ಆರೋಪಗಳು ಅವರ ಕಾರ್ಯಹಂಚಿಕೆಯ ವ್ಯಾಪ್ತಿಗೆ ಬರುವುದಿಲ್ಲ. | The penalty imposed on the appellant has been decided after giving due thought to the gravity of offence etc. Therefore, there is no justification to impose any other lesser penalty than this. Further, the very statement of the appellant that the punishment is disproportionate do indicates that he was guilty. Therefore, none of his arguments deserves any consideration and liable to be rejected in the interest of justice. |

ಮೇಲ್ಕಂಡ ವಾಸ್ತವಾಂಶಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 137 ಎಸ್‌ಇಎನ್ 05, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2006**

I have considered the appeal petition under Rule 10 of KCS (CCA) Rules, 1957 submitted by Sri. Ravikumar Kamalapurkar, Chief Accounts Officer, Zilla Panchayat, Bidar (presently working as Chief Accounts Officer, Social Welfare Department, M.S.Building, Bangalore) against the orders of Government as Disciplinary Authority imposing the penalty of withholding three annual increments with cumulative effect as per Rule 8(iii) of KCS (CCA) Rules, 1957 vide G.O. No. DPAR 74 SEN 2002 dated 23.05.2005. The appeal has been considered in the light of the contentions made in the appeal petition and the connected inquiry records and the appeal records.

On going through the records, I find that it is the Standing Committee of Zilla Panchayat, Bidar and not the appellant, which gave consent for the purchase of chemical Amcrylate Bio Adhesive. The procurement process had been initiated and completed by the DHO of the Health Department. The Finance Department also gave clearance for the purchase of the chemical. Since it is a collective responsibility, the appellant cannot absolve himself of this misdemeanour. Under Section 197(4) and (5) of the Karnataka Panchayat Raj Act, 1993, he is bound to advise the Z.P. in financial matters and ensure that no expenditure is incurred without proper sanction in accordance with the Act and rules framed there under. He should have advised the Standing Committee of the Z.P. suitably before any decision was taken.

It is a clear case of financial impropriety and it is only proper that action should also be taken on the retired officers namely the CEO, DHO and the GA to DHO.

In the present case, I allow the Appeal Petition and the punishment awarded to Sri. Ravikumar Kamalapurkar is modified to the extent that it be reduced to **withholding of two annual increments with cumulative effect.**

**T.N. CHATURVEDI**
Governor of Karnataka

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 240

**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

**ವಿಷಯ:** ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ, ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 113 ಎಸ್ಇಎನ್ 03 ದಿನಾಂಕ: 29.06.2005.

2) ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 29.12.2005.

**ಪ್ರಸ್ತಾವನೆ :**

ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್‌ರವರು ಅಧೀಕ್ಷಕ ಅಭಿಯಂತರರಾಗಿದ್ದಾಗ ಅವರ ಬಡ್ತಿ ವಿಷಯದಲ್ಲಿ ಶ್ರೀ ಎಸ್. ಸೆಲ್ವಕುಮಾರ್, ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು), ವಿಧಾನ ಸೌಧ ಇವರಿಗೆ ಹಣದ ಆಮಿಷ ತೋರಿಸಿದರೆನ್ನಲಾದ ಆರೋಪಕ್ಕಾಗಿ ಶ್ರೀ ಎಂ.ಬಿ. ವೆಂಕಟರೆಡ್ಡಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 29.06.05 ಸರ್ಕಾರಿ ಆದೇಶಗಳಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ವಿಚಾರಣಾ ವರದಿಯನ್ನು ದಿನಾಂಕ: 29.12.05 ರಂದು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 113 ಎಸ್ಇಎನ್ 03, ಬೆಂಗಳೂರು, ದಿನಾಂಕ: 20ನೇ ಜನವರಿ 2006**

ಸರ್ಕಾರವು ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.4.1998 ರನ್ವಯ ರೂ. 5,000/- (ಐದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ ರೂ. 1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 177

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸಮೀಕ್ಷೆ-2006 - ಸಮೀಕ್ಷಾ ದತ್ತು ಸಂಸ್ಕರಣೆಗೆ ತಾಂತ್ರಿಕ ಸಲಹಾ ಸಮಿತಿ ಮತ್ತು ಟೆಂಡರ್ ಮೌಲ್ಯ ಮಾಪನ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ ಸಕಇ 223 ಬಿಸಿಎ 2005 ದಿನಾಂಕ:13.12.2005

2) ಸದಸ್ಯ ಕಾರ್ಯದರ್ಶಿಗಳು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಬೆಂಗಳೂರು ಇವರ ಏಕ ಕಡತ ಸಂಖ್ಯೆ ಕರಾಹಿಂವಆ/ಆಡಳಿತ-1/ಸಿಆರ್.1/2005-06 ದಿನಾಂಕ:10.01.2006

**ಪ್ರಸ್ತಾವನೆ :**

ಮೇಲೆ ಓದಲಾದ (2) ರ ಏಕ ಕಡತದಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಸದಸ್ಯ ಕಾರ್ಯದರ್ಶಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ರಾಜ್ಯಾಂದ್ಯಂತ ಕೈಗೊಳ್ಳಲಿರುವ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಮನೆ-ಮನೆ ಸಮೀಕ್ಷೆಯಲ್ಲಿ ಅಂದಾಜು 5.69 ಕೋಟಿ ಜನಸಂಖ್ಯೆಯ 112.00 ಲಕ್ಷ ಕುಟುಂಬಗಳನ್ನು ಒಳಗೊಂಡಿದ್ದು ಸದರಿ 112.00 ಲಕ್ಷ ಕುಟುಂಬಗಳ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ವಿವರಗಳನ್ನು ಸಮೀಕ್ಷಾ ನಮೂನೆಗಳಲ್ಲಿ (Non-ICR) ಮನೆ ಮನೆಗೆ ಭೇಟಿ ನೀಡಿ ಮಾಹಿತಿಯನ್ನು ಸಂಗ್ರಹಿಸಿ, ಪುನಃ ಹೀಗೆ ಭರ್ತಿ ಮಾಡಿದ ಕೋಡೆಡ್ ಮಾಹಿತಿಯನ್ನು ಐಸಿಆರ್ ನಮೂನೆಯಲ್ಲಿ ಆಂಗ್ಲ ಭಾಷೆಯಲ್ಲಿ ಭರ್ತಿ ಮಾಡಲಾಗುವುದು. ನಂತರ ಮಾಹಿತಿಯನ್ನು ಐಸಿಆರ್ ತಂತ್ರಜ್ಞಾನದ ಮೂಲಕ ಗಣಕೀಕರಣಗೊಳಿಸಬೇಕಾಗುತ್ತದೆ. ಅದರಂತೆ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಕೂಡ 133 ನೇ ಸಭೆಯಲ್ಲಿ ತೀರ್ಮಾನಿಸಿರುತ್ತದೆ. ಏಪ್ರಿಲ್-ಮೇ 2006 ರಲ್ಲಿ ಸಮೀಕ್ಷೆ ನಡೆಸಲು ಉಲ್ಲೇಖ(1) ರಲ್ಲಿ ವೇಳಾಪಟ್ಟಿಯನ್ನು ಸಹಾ ಪ್ರಕಟಿಸಿರುವುದರಿಂದ, ಸಮೀಕ್ಷಾ ಕಾರ್ಯಕ್ಕೆ ಬೇಕಾಗುವ ಅಂದಾಜು ರೂ.112.00 ಲಕ್ಷ ಐಸಿಆರ್ ನಮೂನೆಗಳನ್ನು ಮುದ್ರಿಸಲು ಕರ್ನಾಟಕ ಸರಕು ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮ 2000 ರನ್ವಯ ಸಮೀಕ್ಷಾ ದತ್ತ ಸಂಸ್ಕರಣೆ ಸಲುವಾಗಿ ಅಲ್ಪಾವಧಿ ಟೆಂಡರ್ ಕರೆಯಲು ಸದಸ್ಯ ಕಾರ್ಯದರ್ಶಿಗಳು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಇವರಿಗೆ ಪ್ರತ್ಯಧಿಕಾರ ನೀಡಲು ಕೋರಿರುತ್ತಾರೆ. ಅಲ್ಲದೇ ತಾಂತ್ರಿಕ ಹಾಗೂ ಆರ್ಥಿಕ ಟೆಂಡರ್ ದಾಖಲೆಗಳನ್ನು ಸಿದ್ಧಪಡಿಸಲು ಹಾಗೂ ಗುತ್ತಿಗೆದಾರರು ಸಲ್ಲಿಸಿಸುವ ಟೆಂಡರ್‌ಗಳ ಮೌಲ್ಯಮಾಪನ ಮಾಡುವ ಸಂಬಂಧ ಅಗತ್ಯ ಸಲಹೆಗಾಗಿ ಈ ಕೆಳಕಂಡ ತಾಂತ್ರಿಕ ಸಲಹಾ ಸಮಿತಿ ಹಾಗೂ ಟೆಂಡರ್ ಮೌಲ್ಯ ಮಾಪನ ಸಮಿತಿಯನ್ನು ಕರ್ನಾಟಕ ಸರಕುಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ವಯ ರಚಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುವರು

| | | |
|---|---|---|
| 1 | ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಹಾಗೂ ಸದಸ್ಯ ಕಾರ್ಯದರ್ಶಿಗಳು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಬೆಂಗಳೂರು | : ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇ- ಇ- ಗವರ್ನೆನ್ಸ್ ಬೆಂಗಳೂರು ಇವರ ಪ್ರತಿನಿಧಿ | : ಸದಸ್ಯರು |
| 3 | ಎನ್ಐಸಿ ಭಾರತ ಸರ್ಕಾರ ಬೆಂಗಳೂರು ಇವರ ಪ್ರತಿ ನಿಧಿ | : ಸದಸ್ಯರು |
| 4 | ಜನಗಣತಿ ನಿರ್ದೇಶನಾಲಯದ ಉನ್ನತ ಅಧಿಕಾರಿ ಬೆಂಗಳೂರು | : ಸದಸ್ಯರು |
| 5 | ರಾಜ್ಯ ಯೋಜನಾ ನಿರ್ದೇಶಕರು ಸರ್ವಶಿಕ್ಷಣ ಅಭಿಯಾನ ಅಥವಾ ಅವರ ಪ್ರತಿ ನಿಧಿ | : ಸದಸ್ಯರು |
| 6 | ಮುಖ್ಯಸ್ಥರು ಮುದ್ರಣ ತಂತ್ರಜ್ಞಾನ ವಿಭಾಗ, ಎಸ್.ಜೆ. ಪಾಲಿಟೆಕ್ನಿಕ್ ಬೆಂಗಳೂರು | : ಸದಸ್ಯರು |
| 7 | ಮುಖ್ಯ ಲೆಕ್ಕಾಧಿಕಾರಿಗಳು ಆಯುಕ್ತರ ಕಛೇರಿ ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು | : ಸದಸ್ಯರು |
| 8 | ಉಪ ಕಾರ್ಯದರ್ಶಿಗಳು (ಸಾಂಖ್ಯಿಕ) ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಬೆಂಗಳೂರು | : ಸಂಚಾಲಕರು |

ಸರ್ಕಾರವು ಆಯೋಗದ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 9 ಬಿಸಿಎ 2006, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2006**

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಏಪ್ರಿಲ್-ಮೇ 2006 ರಲ್ಲಿ ರಾಜ್ಯಾದ್ಯಂತ ಕೈಗೊಳ್ಳಲಿರುವ ಸಾಮಾಜಿಕ ಶೈಕ್ಷಣಿಕ ಮತ್ತು ಆರ್ಥಿಕ ಮನೆ-ಮನೆ ಸಮೀಕ್ಷೆಗಾಗಿ 112.00 ಲಕ್ಷ ಐಸಿಆರ್ ನಮೂನೆಗಳನ್ನು ಮುದ್ರಿಸಲು ಕೆಟಿಪಿಪಿ ನಿಯಮ 17(1) ರ ಅನ್ವಯ ಅಲ್ಪಾವಧಿ ಟೆಂಡರ್ ಕರೆಯಲು ಸದಸ್ಯ ಕಾರ್ಯದರ್ಶಿಗಳು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಬೆಂಗಳೂರು ಇವರಿಗೆ ಪ್ರತ್ಯಧಿಕಾರ ನೀಡಿ ಆದೇಶಿಸಿದೆ ಹಾಗೂ ಕೆಟಿಪಿಪಿ ನಿಯಮ 20 ರಂತೆ ಈ ಕೆಳಕಂಡ ಸದಸ್ಯರೊಳಗೊಂಡ ತಾಂತ್ರಿಕ ಸಲಹಾ ಹಾಗೂ ಟೆಂಡರ್ ಮೌಲ್ಯ ಮಾಪನ ಸಮಿತಿಯನ್ನು ರಚಿಸಿ ಆದೇಶಿಸಿದೆ.

**ತಾಂತ್ರಿಕ ಸಲಹಾ ಹಾಗೂ ಟೆಂಡರ್ ಮೌಲ್ಯ ಮಾಪನ ಸಮಿತಿ**

| | | |
|---|---|---|
| 1 | ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಹಾಗೂ ಸದಸ್ಯ ಕಾರ್ಯದರ್ಶಿಗಳು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಬೆಂಗಳೂರು | : ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿಗಳು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇ- ಇ- ಗವರ್ನೆನ್ಸ್ ಬೆಂಗಳೂರು ಇವರ ಪ್ರತಿನಿಧಿ | : ಸದಸ್ಯರು |
| 3 | ಎನ್ಐಸಿ ಭಾರತ ಸರ್ಕಾರ ಬೆಂಗಳೂರು ಇವರ ಪ್ರತಿ ನಿಧಿ | : ಸದಸ್ಯರು |
| 4 | ಜನಗಣತಿ ನಿರ್ದೇಶನಾಲಯದ ಉನ್ನತ ಅಧಿಕಾರಿ ಬೆಂಗಳೂರು | : ಸದಸ್ಯರು |
| 5 | ರಾಜ್ಯ ಯೋಜನಾ ನಿರ್ದೇಶಕರು ಸರ್ವಶಿಕ್ಷಣ ಅಭಿಯಾನ ಬೆಂಗಳೂರು ಅಥವಾ ಅವರ ಪ್ರತಿ ನಿಧಿ | : ಸದಸ್ಯರು |
| 6 | ಮುಖ್ಯಸ್ಥರು ಮುದ್ರಣ ತಂತ್ರಜ್ಞಾನ ವಿಭಾಗ, ಎಸ್.ಜೆ. ಪಾಲಿಟೆಕ್ನಿಕ್ ಬೆಂಗಳೂರು | : ಸದಸ್ಯರು |
| 7 | ಮುಖ್ಯ ಲೆಕ್ಕಾಧಿಕಾರಿಗಳು ಆಯುಕ್ತರ ಕಛೇರಿ ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು | : ಸದಸ್ಯರು |
| 8 | ಉಪ ಕಾರ್ಯದರ್ಶಿಗಳು (ಸಾಂಖ್ಯಿಕ) ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಬೆಂಗಳೂರು | : ಸಂಚಾಲಕರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 278 **ಬಿ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ) ಸಮಾಜ ಕಲ್ಯಾಣ ಇಲಾಖೆ.

**ವಿಷಯ:** ಶ್ರೀ ಆರ್.ಶಿವಣ್ಣ, ಸಹಶಿಕ್ಷಕರು, ಶ್ರೀ ಎನ್ ಶಿವಮೂರ್ತಿ, ಸಹಶಿಕ್ಷಕರು, ಮತ್ತು ಶ್ರೀ ಸಿ ಚೌಡಪ್ಪ, ಸಹಶಿಕ್ಷಕರು, ಶಿಕ್ಷಣ ಇಲಾಖೆ ಇವರನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿನ ಆಶ್ರಮ ಶಾಲಾ ಶಿಕ್ಷಕರ ಹುದ್ದೆಯಲ್ಲಿ ವಿಲೀನಗೊಳಿಸುವ ಕುರಿತಾದ ಆದೇಶ.

**ಓದಲಾಗಿದೆ:** 1) ಹಿಂವನಿ :ಸಿಬ್ಬಂದಿ-6:ಸಿಆರ್-67/2004-05, ದಿನಾಂಕ 22.11.2004
2) ಹಿಂವನಿ/ಸಿಬ್ಬಂದಿ-6/ಸಿಆರ್-66/2003-04, ದಿನಾಂಕ 22.11.2004
3) ಹಿಂವನಿ :ಸಿಬ್ಬಂದಿ-6:ಸಿಆರ್-78/2004-05, ದಿನಾಂಕ 22.11.2004

ಮೇಲಿನ ಪತ್ರಗಳು ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರಿಂದ ಸ್ವೀಕೃತವಾಗಿವೆ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 22.11.2004 ರ ಪತ್ರದಲ್ಲಿ ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಶ್ರೀಯುತ ಆರ್.ಶಿವಣ್ಣ ಸಹಶಿಕ್ಷಕರು ಇವರು ಮೂಲತ: ಶಿಕ್ಷಣ ಇಲಾಖೆಗೆ ಸೇರಿದ್ದು, ನಿಯೋಜನೆ ಮೇಲೆ ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಚಿತ್ರದುರ್ಗ ಇಲ್ಲಿ ದಿನಾಂಕ 28.06.2001 ರಿಂದ ಕಾರ್ಯನಿರ್ವಹಿಸುತ್ತಿರುವರು. ಸದರಿಯವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ಹೊಸದುರ್ಗ ತಾಲ್ಲೂಕು ತಿಮ್ಮಯ್ಯನಹಟ್ಟಿಯಲ್ಲಿರುವ ಆಶ್ರಮ ಶಾಲಾ ಶಿಕ್ಷಕರ ಹುದ್ದೆಯು ಖಾಲಿ ಇದ್ದು ಈ ಹುದ್ದೆಯಲ್ಲಿ ವಿಲೀನಗೊಳಿಸಲು ವಿನಂತಿಸಿಕೊಂಡಿರುವರು. ಸದರಿ ವಿಷಯಕ್ಕೆ ಸಂಬಂಧಿಸಿದಂತೆ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರಿಯಾದ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ ಇವರು ವಿಲೀನಗೊಳಿಸುವ ಪ್ರಸ್ತಾವನೆಗೆ ಸಹಮತಿ ನೀಡಿರುವರು. ಇದಲ್ಲದೆ ನೌಕರರು ಹಾಲಿ ಹಿಂದುಳಿದ ವರ್ಗಗಳ ಇಲಾಖೆಯಲ್ಲಿನ ಆಶ್ರಮ ಶಾಲಾ ಶಿಕ್ಷಕರ ಜೇಷ್ಟತೆಯಲ್ಲಿ ಕಿರಿಯವರಾಗಿ ಸೇವಾ ಹಿರಿತನ ಬಿಟ್ಟುಕೊಡಲು ಒಪ್ಪಿಗೆ ನೀಡಿರುವರು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿನಾಂಕ 22.11.2004 ರ ಪತ್ರದಲ್ಲಿ ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಶ್ರೀಯುತ ಎನ್ ಶಿವಮೂರ್ತಿ ಇವರು ಮೂಲತ: ಶಿಕ್ಷಣ ಇಲಾಖೆಗೆ ಸೇರಿದ್ದು, ಸದರಿ ನೌಕರರು ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಗುಡ್ಡದಗೊಲ್ಲರಹಟ್ಟಿಯ ಆಶ್ರಮ ಶಾಲಾ ಶಿಕ್ಷಕರ ಹುದ್ದೆಯಲ್ಲಿ ದಿನಾಂಕ 08.08.2001 ರಿಂದ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವರೆಂದು

ವರದಿ ಮಾಡಿರುವರು. ಸದರಿ ನೌಕರರು ಸರ್ಕಾರಕ್ಕೆ ಮನವಿ ಸಲ್ಲಿಸಿ, ಹಿರಿಯೂರು ತಾಲ್ಲೂಕು ಗುಡ್ಡದಗೊಲ್ಲರಹಟ್ಟಿ ಆಶ್ರಮಶಾಲೆಯಲ್ಲಿ ಖಾಲಿ ಇರುವ ಆಶ್ರಮ ಶಾಲಾ ಶಿಕ್ಷಕರ ಹುದ್ದೆಯಲ್ಲಿ ವಿಲೀನಗೊಳಿಸಲು ವಿನಂತಿಸಿರುವರು. ಸದರಿ ವಿಷಯವನ್ನು ಇಲಾಖೆಯು ಪರಿಶೀಲಿಸಿ, ನೇಮಕಾತಿ ಹಾಗೂ ಶಿಸ್ತು ಪ್ರಾಧಿಕಾರಿಯಾದ ಸಾರ್ವಜನಿಕ ಶಿಕ್ಷಣ ಉಪನಿರ್ದೇಶಕರು, ಚಿತ್ರದುರ್ಗ ಇವರು ಸದರಿ ನೌಕರರನ್ನು ಆಶ್ರಮ ಶಾಲಾ ಶಿಕ್ಷಕರ ಹುದ್ದೆಯಲ್ಲಿ ವಿಲೀನಗೊಳಿಸಲು ಸಹಮತಿ ನೀಡಿರುವರು. ಇದಲ್ಲದೆ ಶ್ರೀ ಎಸ್ ಶಿವಮೂರ್ತಿ ಇವರು ಮನವಿ ಸಲ್ಲಿಸಿ, ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಆಶ್ರಮ ಶಾಲಾ ಶಿಕ್ಷಕರ ಜೇಷ್ಠತಾಪಟ್ಟಿಯಲ್ಲಿ ಕಿರಿಯವರಾಗಿ ಸೇವಾ ಹಿರಿತನ ಬಿಟ್ಟುಕೊಡಲು ದಿನಾಂಕ 19.05.2004 ರಂದು ಒಪ್ಪಿಗೆ ಪತ್ರ ನೀಡಿರುವರು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿನಾಂಕ 22.11.2004 ರ ಪತ್ರದಲ್ಲಿ ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಶ್ರೀಯುತ ಸಿ.ಚೌಡಪ್ಪ ಸಹಶಿಕ್ಷಕರು ಇವರು ಮೂಲತ: ಶಿಕ್ಷಣ ಇಲಾಖೆಗೆ ಸೇರಿದ್ದು, ಹಾಲಿ ನಿಯೋಜನೆ ಮೇಲೆ ಹಿಂದುಳಿದ ವರ್ಗಗಳ ಇಲಾಖೆಯ ಆಶ್ರಮ ಶಾಲೆ ಹೊನಗೊಂಡನಹಳ್ಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವರು. ಸದರಿ ನೌಕರರು ಮನವಿ ಸಲ್ಲಿಸಿ, ಹಿಂದುಳಿದ ವರ್ಗಗಳ ಇಲಾಖೆಯ ಆಶ್ರಮ ಶಾಲಾ ಶಿಕ್ಷಕರ ಹುದ್ದೆಯಲ್ಲಿ ವಿಲೀನಗೊಳಿಸಲು ಕೋರಿರುವರು. ಸದರಿ ವಿಷಯವನ್ನು ಇಲಾಖೆಯು ಪರಿಶೀಲಿಸಿದೆ. ಸದರಿ ನೌಕರರ ನೇಮಕಾತಿ/ಶಿಸ್ತು ಪ್ರಾಧಿಕಾರಿಯಾದ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು, ತುಮಕೂರು ಇವರು ಸದರಿಯವರನ್ನು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಆಶ್ರಮಶಾಲಾ ಶಿಕ್ಷಕರ ಹುದ್ದೆಯಲ್ಲಿ ವಿಲೀನಗೊಳಿಸಲು ಸಹಮತಿ ನೀಡಿರುವರು. ಇದಲ್ಲದೆ ಶ್ರೀಯುತ ಸಿ ಚೌಡಪ್ಪ ಇವರು ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ವಿಲೀನಗೊಳಿಸಿದಲ್ಲಿ ಹಾಲಿ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಆಶ್ರಮಶಾಲಾ ಶಿಕ್ಷಕರ ಜೇಷ್ಠತಾ ಪಟ್ಟಿಯಲ್ಲಿ ಕಿರಿಯವರಾಗಿ ಜೇಷ್ಠತೆಯನ್ನು ಬಿಟ್ಟುಕೊಡಲು ದಿನಾಂಕ 04.06.2004 ರ ಪತ್ರದಲ್ಲಿ ಒಪ್ಪಿಗೆ ನೀಡಿರುವರು.

ಮೇಲ್ಕಂಡಿಸಿದ ನೌಕರರು ಪರೀಕ್ಷಾಪೂರ್ವ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವರು. ಸದರಿ ನೌಕರರುಗಳು ಆಶ್ರಮ ಶಾಲಾ ಶಿಕ್ಷಕರ ಹುದ್ದೆಗೆ ಬೇಕಾದ ಎಸ್ ಎಸ್ ಎಲ್ ಸಿ ಹಾಗು ಟಿ ಸಿ ಹೆಚ್ (ತತ್ಸಮಾನ ವಿದ್ಯಾರ್ಹತೆ) ಹೊಂದಿದ ನೌಕರರುಗಳನ್ನು ನೇರ ನೇಮಕಾತಿಯಿಂದಾಗಲೀ ಅಥವಾ ಶಿಕ್ಷಣ ಇಲಾಖೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡಲು ಹಿಂದುಳಿದ ವರ್ಗಗಳ ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶವಿದೆ. ಅಂದರೆ ಆಶ್ರಮ ಶಾಲಾ ಶಿಕ್ಷಕರ ಹುದ್ದೆಗೆ ಬೇಕಾದ ವಿದ್ಯಾರ್ಹತೆಯನ್ನು ಸದರಿ ನೌಕರರು ಪೂರೈಸಿರುವರು. ಪ್ರಾಥಮಿಕ ಶಾಲಾ ಸಹ ಶಿಕ್ಷಕರ ಕಾಲಿಕ ವೇತನ ಶ್ರೇಣಿ 3300–6300 ಇದ್ದು ಹಾಲಿ ಹಿಂದುಳಿದ ವರ್ಗಗಳ ಇಲಾಖೆಯ ಆಶ್ರಮ ಶಾಲಾ ಶಿಕ್ಷಕರ ಹುದ್ದೆಯ ವೇತನ ಶ್ರೇಣಿಯೂ ಸಹ ಇರುವುದು.

ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಹಾಲಿ 78 ಆಶ್ರಮ ಶಾಲೆಗಳಿದ್ದು, ಒಟ್ಟು 128 ಹುದ್ದೆಗಳು ಮಂಜೂರಾಗಿರುತ್ತವೆ. ಮಂಜೂರಾದ ಹುದ್ದೆಗಳಲ್ಲಿ 53 ಉಪಾಧ್ಯಾಯರುಗಳು ಸಕ್ರಮವಾಗಿ ನೇಮಕವಾಗಿದ್ದು, ಇನ್ನು 75 ಹುದ್ದೆಗಳು ಖಾಲಿ ಇರುವುವು.

ಸದರಿ ನೌಕರರನ್ನು ವಿಲೀನಗೊಳಿಸುವ ಕುರಿತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾನಿಯಮ) ಯೊಂದಿಗೆ ವ್ಯವಹರಿಸಿ, ಮಾರ್ಗದರ್ಶನ ಪಡೆದು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 349 ಬಿಇಟಿ 2004, ಬೆಂಗಳೂರು, ದಿನಾಂಕ: 13ನೇ ಫೆಬ್ರುವರಿ 2006**

ಪ್ರಸ್ತಾವನೆಯಲ್ಲಿ ತಿಳಿಯಪಡಿಸಲಾದ ಎಲ್ಲಾ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಶ್ರೀಯುತ ಆರ್ ಶಿವಣ್ಣ ಸಹಶಿಕ್ಷಕರು, ಹಾಲಿ ನಿಯೋಜನೆ ಮೇಲೆ ನಿಲಯ ಮೇಲ್ವಿಚಾರಕರು, ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಚಿತ್ರದುರ್ಗ, ಶ್ರೀ ಎಸ್ ಶಿವಮೂರ್ತಿ, ಸಹಶಿಕ್ಷಕರು, ನಿಯೋಜನೆ ಮೇಲೆ ಆಶ್ರಮ ಶಾಲಾ ಸಹಶಿಕ್ಷಕರು, ಗುಡ್ಡದಗೊಲ್ಲರಹಟ್ಟಿ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಮತ್ತು ಶ್ರೀ ಸಿ ಚೌಡಪ್ಪ, ನಿಯೋಜನೆ ಮೇಲೆ ಆಶ್ರಮ ಶಾಲಾ ಸಹಶಿಕ್ಷಕರು, ಹೊನ್ನಗೊಂಡನಹಳ್ಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ ಇವರುಗಳನ್ನು ಹಿಂದುಳಿದ ವರ್ಗಗಳ ಇಲಾಖೆಯು ನಡೆಸುವ ಆಶ್ರಮ ಶಾಲಾ ಶಿಕ್ಷಕರ ಕಾಲಿಕ ವೇತನ ಶ್ರೇಣಿ 3300–6300 ರಲ್ಲಿ ಖಾಯಂ ಆಗಿ ವಿಲೀನಗೊಳಿಸಿ, ಸರ್ಕಾರವು ಆದೇಶ ನೀಡಿದೆ. ಸದರಿ ನೌಕರರುಗಳು ಈ ಆದೇಶ ಹೊರಡಿಸುವ ದಿನಾಂಕದಂದು ಹಿಂದುಳಿದ ವರ್ಗಗಳ ಇಲಾಖೆಯ ಆಶ್ರಮ ಶಾಲಾ ಶಿಕ್ಷಕರ ಜೇಷ್ಠತಾ ಪಟ್ಟಿಯಲ್ಲಿ ಕೊನೆಯವರಾಗಿ ಇರುವ ಜೇಷ್ಠತೆಯನ್ನು ಒಪ್ಪಿಕೊಳ್ಳುವ ಷರತ್ತಿನ ಮೇರೆಗೆ ಹಾಗೂ ಸಂಬಂಧಿಸಿದ ನೌಕರರು ಯಾವುದೇ ವರ್ಗಾವಣೆ ಭತ್ಯೆ ಪಡೆಯಲು ಅರ್ಹತೆ ಇರುವುದಿಲ್ಲ ಎಂಬ ಷರತ್ತಿನ ಮೇಲೆ ಕರ್ನಾಟಕ ಸಿವಿಲ್ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳನ್ವಯ 1977 ರ ನಿಯಮ 16 (ಎ) (2) ರ ಅಡಿ ಆಶ್ರಮ ಶಾಲಾ ಶಿಕ್ಷಕರ ಹುದ್ದೆಯಲ್ಲಿ ವಿಲೀನಗೊಳಿಸಿ, ಸರ್ಕಾರವು ಆದೇಶಿಸಿದೆ.

ಸಿಆಸುಇ 105 ಸೇನಿಎ 2005, ದಿನಾಂಕ 29.01.2005 ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮ) ನೀಡಿರುವ ಮಾರ್ಗದರ್ಶನದನ್ವಯ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 279 **ಬಿ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ) ಸಮಾಜ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯಲ್ಲಿನ ಸರ್ಕಾರದ ಕಾರ್ಯದರ್ಶಿ (ಬರಪರಿಹಾರ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 4 ಸಸಿವಿ 2004, ದಿನಾಂಕಃ 20.2.2004.
2) ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 98 ಸಸಿವಿ 2004, ದಿನಾಂಕಃ 24.12.2004.
3) ಕಡತ ಸಂಖ್ಯೆ: ಆರ್‌ಡಿ 40 ಟಿಎನ್‌ಆರ್ 2006.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯಲ್ಲಿನ ಸರ್ಕಾರದ ಕಾರ್ಯದರ್ಶಿ (ಬರ ಪರಿಹಾರ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿತ್ತು.

| | | |
|---|---|---|
| 1. | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 2 ಹುದ್ದೆ |
| 2. | ಶಾಖಾಧಿಕಾರಿ : ಹಿರಿಯ ಸಹಾಯಕ | 1 ಹುದ್ದೆ |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ವಾಹನ ಚಾಲಕ | 1 ಹುದ್ದೆ |
| 5. | ದಲಾಯತ್ | 2 ಹುದ್ದೆ |
| | ಒಟ್ಟು | 7 ಹುದ್ದೆಗಳು |

ಸದರಿ ಹುದ್ದೆಗಳನ್ನು ದಿನಾಂಕ: 12.1.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ ಪ್ರಸ್ತಾವನೆ ಇದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 91 ಸಸಿವಿ 2005, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಬರ ಪರಿಹಾರ) ಹುದ್ದೆಯನ್ನು ಪ್ರಸ್ತಾವನೆಯಲ್ಲಿ ಸೂಚಿಸಲಾದ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 12.1.2006 ರಿಂದ ಒಂದು ವರ್ಷದ ಅವಧಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಸಂಖ್ಯೆಃ ಆಇ 1 ಟಿಎಫ್‌ಪಿ/96, ದಿನಾಂಕಃ 10.7.1996 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 267

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ:** ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಸಸಿವಿ 2002 ದಿನಾಂಕ: 11.3.2002.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 2003 ದಿನಾಂಕ: 21.6.2003.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2004 ದಿನಾಂಕ: 4.5.2004.
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 2005 ದಿನಾಂಕ: 12.1.2005.
5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಡಿಒಹೆಚ್ 324 ಪಿಆರ್ ಎಸ್ 2006, ದಿನಾಂಕ: 20.1.2006.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 11.3.2002ರ ಸರ್ಕಾರದ ಆದೇಶದಲ್ಲಿ ವಸತಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 10.1.2002 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿರುತ್ತದೆ. ನಂತರ ಕ್ರಮ ಸಂಖ್ಯೆ (2) ಮತ್ತು (3) ಹಾಗೂ (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಈ ಹುದ್ದೆಯನ್ನು ದಿನಾಂಕ: 31.3.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿರುತ್ತದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 20.1.2006ರ ಟಿಪ್ಪಣಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2006 ರಿಂದ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 7 ಸಸಿವಿ 2006, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2006**

ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.4.2006 ರಿಂದ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 268

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ:** ಸಿ.ಆ.ಸು.ಇಲಾಖೆಯ (ಆ.ಸು) ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆಃ ಡಿಪಿಎಆರ್ 470 ಎಸ್‌ಎಎಸ್ 2004, ದಿನಾಂಕಃ 4.1.2006.

**ಪ್ರಸ್ತಾವನೆ :**

ಮೇಲೆ ದಿನಾಂಕ: 4.1.2006ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಡಾ: ಜೆ.ಎನ್.ಚೌಬೆ, ಐಎಎಸ್ ಇವರಿಗೆ ವೇತನ ನಿಗದಿತ ಶ್ರೇಣಿ ರೂ. 26,000 ರಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಸಿ.ಆ.ಸು.ಇಲಾಖೆಯಲ್ಲಿ (ಆ.ಸು) ಉನ್ನತೀಕರಿಸಲಾಗುವ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ನೇಮಿಸಲಾಗಿರುತ್ತದೆ. ಆದ್ದರಿಂದ ಸಿ.ಆ.ಸು. ಇಲಾಖೆ (ಆ.ಸು) ಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮರುಪದನಾಮೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2006, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿ.ಆ.ಸು.ಇಲಾಖೆಯ (ಆ.ಸು) ವಿಭಾಗದಲ್ಲಿನ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಡಾ: ಜೆ.ಎನ್.ಚೌಬೆ, ಐ.ಎ.ಎಸ್. ಇವರು ಕಾರ್ಯ ವರದಿಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಸದರಿಯವರು

ಸ್ವಇಚ್ಛಾ ನಿವೃತ್ತಿ ಹೊಂದಿದ ದಿನಾಂಕ: 21.1.2006 ರವರೆಗೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸುವುದರೊಂದಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರನ್ವಯ ಹೆಚ್ಚುವರಿ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಂಜೂರು ಮಾಡಿದೆ. ನಂತರ ಸದರಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಪರಿಗಣಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 64 ಸೇ–4/2003, ದಿನಾಂಕ: 1.2.2006ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 269

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು–2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಪ್ರಾರೂಪಣ ವಿಭಾಗದ ಗ್ರೂಪ್ ^ಎ^ ಅಧಿಕಾರಿಗಳಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ನೀಡಲಾಗುತ್ತಿರುವ ಗೌರವ ಧನವನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 300 ಸಅಸೇ 2004, ದಿನಾಂಕ: 25.9.2004.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 25.9.2004ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಪ್ರಾರೂಪಣ ವಿಭಾಗದ ಗ್ರೂಪ್ ^ಎ^ ವರ್ಗದ ಅಧಿಕಾರಿಗಳಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ನೀಡಲಾಗುತ್ತಿರುವ ಗೌರವ ಧನವನ್ನು ಪ್ರಸ್ತುತ ಷರಗಳಲ್ಲಿಯೇ ದಿನಾಂಕ: 1.1.2004 ರಿಂದ ಮುಂದುವರೆಸಿ ಆದೇಶಿಸಲಾಗಿರುತ್ತದೆ.

ಆದರೆ, ಮುಖ್ಯ ಮಂತ್ರಿಗಳ ಸಚಿವಾಲಯ : ಉಪ ಮುಖ್ಯ ಮಂತ್ರಿಗಳ ಸಚಿವಾಲಯ : ಮುಖ್ಯ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗ್ರೂಪ್ ^ಎ^ ವರ್ಗದ ಅಧಿಕಾರಿಗಳಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ಕಾರ್ಯ ನಿರ್ವಹಿಸುವುದಕ್ಕಾಗಿ ಗೌರವ ಧನವನ್ನು ಮಂಜೂರು ಮಾಡುತ್ತಿಲ್ಲವಾದುದರಿಂದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಪ್ರಾರೂಪಣ ವಿಭಾಗದ ಗ್ರೂಪ್ ^ಎ^ ವೃಂದದ ಅಧಿಕಾರಿಗಳಿಗೆ ನೀಡಲಾಗುತ್ತಿರುವ ಗೌರವ ಧನವನ್ನು ರದ್ದು ಪಡಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 194 ಸಅಸೇ 2005 (02), ಬೆಂಗಳೂರು, ದಿನಾಂಕ: 28ನೇ ಜನವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಪ್ರಾರೂಪಣ ವಿಭಾಗದ ಗ್ರೂಪ್ ^ಎ^ ವೃಂದದ ಅಧಿಕಾರಿಗಳಿಗೆ ವಿಧಾನ ಮಂಡಲ ಅಧಿವೇಶನ ಸಮಯದಲ್ಲಿ ಕಾರ್ಯ ನಿರ್ವಹಣೆಗಾಗಿ ನೀಡಲಾಗುತ್ತಿರುವ ಗೌರವ ಧನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1044 ವೆಚ್ಚ–7/2005, ದಿನಾಂಕ: 19.1.2006 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 233

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು–2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಇಎಂ 96 ದಿನಾಂಕ: 19.2.1997.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 98, ದಿ: 24.4.98.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 98, ದಿ: 24.9.98.
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 99, ದಿ: 3.4.99.
5) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 37 ಸಸಿವಿ 2001, ದಿ: 23.10.2001.
6) ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ: ಆಇ 59 ಪಿಎಂಯು 2005 ದಿನಾಂಕ: 16.12.2005.

**ಪ್ರಸ್ತಾವನೆ :**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆಯಲ್ಲಿ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಯೋಜನಾ ಮೇಲ್ವಿಚಾರಣಾ ಘಟಕವನ್ನು ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| 1. | ಅ. ಜಂಟಿ : ಉಪ ಕಾರ್ಯದರ್ಶಿ<br>ಆ. ಶೀಘ್ರಲಿಪಿಗಾರರು<br>ಇ. ಕಿರಿಯ ಸಹಾಯಕರು | 1<br>1<br>1 |
| 2. | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯಪತ್ರ ಇಲಾಖೆಯಿಂದ ನಿಯೋಜಿಸುವುದು) | 1 (ವೇತನ ಶ್ರೇಣಿ ರಹಿತ ಹುದ್ದೆ |
| 3. | ಸಂಶೋದನಾಧಿಕಾರಿ : ಸ್ಟ್ಯಾಟ್ಸಿಕಲ್ ಅನಾಲಿಸ್ಟ್ (ಸಾಂಸ್ಥಿಕ ಹಾಗೂ ಸಾಂಖ್ಯಿಕ ಇಲಾಖೆಯ ಗಣಕ ಯಂತ್ರ ಜ್ಞಾನವನ್ನು ಹೊಂದಿರುವ ಅಧಿಕಾರಿಯನ್ನು ನಿಯೋಜಿಸುವುದು) | 1 (ವೇತನ ಶ್ರೇಣಿ ರಹಿತ ಹುದ್ದೆ) |
| 4. | ಪ್ರೋಗ್ರಾಮರ್ | 1 |
| 5. | ಶೀಘ್ರಲಿಪಿಗಾರರು : ಡಾಟಾ ಎಂಟ್ರಿ ಆಪರೇಟರ್ | 1 |

ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಲಾಗಿದೆ ಹಾಗೂ ಈ ಹುದ್ದೆಗಳ ಅವಧಿಯು ದಿನಾಂಕ: 19.2.1997ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾದ ಸಿಬ್ಬಂದಿ ವರ್ಗದ ಅವಧಿಯೊಂದಿಗೆ ಕೊನೆಗೊಳ್ಳಲಿರುವುದಾಗಿ ಆದೇಶಿಸಲಾಗಿದೆ.

| | | |
|---|---|---|
| 1. | ಸಂಶೋದನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು : ಸಹ ನಿರ್ದೇಶಕರು : ಉಪ ನಿರ್ದೇಶಕರು, ಯೋಜನಾ ಉಸ್ತುವಾರಿ ಘಟಕ | 2 (ವೇತನ ಶ್ರೇಣಿ ರಹಿತ ಹುದ್ದೆ) |
| 2. | ಶಾಖಾಧಿಕಾರಿ | 1 |
| 3. | ಹಿರಿಯ ಸಹಾಯಕರು | 1 |
| 4. | ಶೀಘ್ರಲಿಪಿಗಾರರು | 1 |
| 5. | ಬೆರಳಚ್ಚುಗಾರರು | 1 |
| 6. | ಟೆಕ್ನೀಷಿಯನ್ (ಗ್ರೂ ^ಡಿ^ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ). | 1 |

ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆ, ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಒಂದು ವಾಹನ ಚಾಲಕರ ಹುದ್ದೆಯನ್ನು ದಿನಾಂಕ: 19.2.1997ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾಗಿರುವ ಸಿಬ್ಬಂದಿ ವರ್ಗದ ಅವಧಿಯೊಂದಿಗೆ ಕೊನೆಗೊಳ್ಳುವಂತೆ ಸೃಜಿಸಲಾಗಿದೆ.

ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ದಿನಾಂಕ: 19.2.1999 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ ಹಾಗೂ ಈ ಹುದ್ದೆಗಳ ಅವಧಿಗೆ ಕೊನೆಗೊಳ್ಳುವಂತೆ ಒಂದು ಡಾಟಾ ಎಂಟ್ರಿ ಆಪರೇಟರ್ ಹುದ್ದೆಯನ್ನು ಸೃಜಿಸಲಾಗಿದೆ.

ಕ್ರಮ ಸಂಖ್ಯೆ (5)ರ ಸರ್ಕಾರಿ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳ ಚಾಲ್ತಿಯ ಅವಧಿಗೆ, ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ; ಹಾಗೂ ^ಸಂಶೋದನಾಧಿಕಾರಿ : ಸ್ಟ್ಯಾಟಿಸ್ಟಿಕಲ್ ಅನಾಲಿಸ್ಟ್^ ಹುದ್ದೆಯನ್ನು ^ಸಹಾಯಕ ನಿರ್ದೇಶಕರು : ಉಪ ನಿರ್ದೇಶಕರು^ ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದೆ.

| | | |
|---|---|---|
| 1. | ಹಿರಿಯ ಸಹಾಯಕ | 1 |
| 2. | ಸಹಾಯಕ | 1 |
| 3. | ಕಿರಿಯ ಸಹಾಯಕ | 1 |

ನಂತರ ಈ ಎಲ್ಲಾ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದೆ. ಕ್ರಮ ಸಂಖ್ಯೆ (6) ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಈ ಹುದ್ದೆಗಳನ್ನು ದಿನಾಂಕ: 19.2.2006 ರಿಂದ ಮತ್ತೆ 3 ವರ್ಷಗಳ ಅವಧಿಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಪ್ರಸ್ತಾವನೆಯನ್ನು ಇಲಾಖಾ ಕಾರ್ಯದರ್ಶಿಗಳ ಅನುಮೋದನೆಯೊಂದಿಗೆ ಕಳುಹಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 101 ಸಸಿವಿ 2005, ಬೆಂಗಳೂರು, ದಿನಾಂಕ: 10ನೇ ಜನವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 19.2.2006 ರಿಂದ ಮತ್ತೆ 2 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಅ. ಜಂಟಿ : ಉಪ ಕಾರ್ಯದರ್ಶಿ<br>ಆ. ಶೀಘ್ರಲಿಪಿಗಾರರು<br>ಇ. ಕಿರಿಯ ಸಹಾಯಕರು | 1<br>1<br>1 |
| 2. | ಅಕೌಂಟ್ಸ್ ಆಫೀಸರ್ (ಮಹಾಲೇಖಪಾಲರ ಕಛೇರಿಯಿಂದ ಅಥವಾ ರಾಜ್ಯಪತ್ರ ಇಲಾಖೆಯಿಂದ ನಿಯೋಜಿಸುವುದು | 1 (ವೇತನ ಶ್ರೇಣಿ ರಹಿತ ಹುದ್ದೆ) |
| 3. | ಸಹಾಯಕ ನಿರ್ದೇಶಕರು : ಉಪ ನಿರ್ದೇಶಕರು | 1 (ವೇತನ ಶ್ರೇಣಿ ರಹಿತ ಹುದ್ದೆ |
| 4. | ಪ್ರೋಗ್ರಾಮರ್ | 1 |
| 5. | ಶೀಘ್ರಲಿಪಿಗಾರರು : ಡಾಟಾ ಎಂಟ್ರಿ ಆಪರೇಟರ್ | 1 |
| 6. | ಸಂಶೋದನಾಧಿಕಾರಿ ಮತ್ತು ಪದನಿಮಿತ್ತ ಅಪರ ನಿರ್ದೇಶಕರು : ಸಹ ನಿರ್ದೇಶಕರು : ಉಪ ನಿರ್ದೇಶಕರು, ಯೋಜನಾ ಮೇಲ್ವಿಚಾರಣಾ ಘಟಕ | 2 (ವೇತನ ಶ್ರೇಣಿ ರಹಿತ ಹುದ್ದೆ) |
| 7. | ಶಾಖಾಧಿಕಾರಿ | 1 |
| 8. | ಹಿರಿಯ ಸಹಾಯಕರು | 1 |
| 9. | ಶೀಘ್ರಲಿಪಿಗಾರರು | 1 |
| 10. | ಬೆರಳಚ್ಚುಗಾರರು | 1 |
| 11. | ಟೆಕ್ನೀಷಿಯನ್ (ಗ್ರೂ ^ಡಿ^ ದರ್ಜೆಯ ನೌಕರರ ವೇತನ ಶ್ರೇಣಿಯಲ್ಲಿ). | 1 |
| 12. | ವಾಹನ ಚಾಲಕ | 1 |
| 13. | ಡಾಟಾ ಎಂಟ್ರಿ ಆಪರೇಟರ್ | 1 |
| 14. | ಹಿರಿಯ ಸಹಾಯಕ | 1 |
| 15. | ಸಹಾಯಕ | 1 |
| 16. | ಕಿರಿಯ ಸಹಾಯಕ | 1 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆಃ ಆಇ 1 ಟಿಎಫ್‌ಪಿ 96, ದಿನಾಂಕಃ 10.7.1996 ರಲ್ಲಿ ನೀಡಿರುವ ಸಹಮತಿ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 234 **ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2).

**ಇಂಧನ ಸಚಿವಾಲಯ**

**ವಿಷಯ:** ಮೆ :: ಪಿನೆಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 13.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಬೆಟ್ಟ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಡಿಇ 147 ಎನ್‌ಸಿಇ 2004 ದಿನಾಂಕ : 20.05.2004.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ದೇವರಬೆಟ್ಟ/2005/206 ದಿನಾಂಕ : 20.01.2006.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ :: ಪಿನೆಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ದೇವರಬೆಟ್ಟ ಹೊಳೆಗೆ ಅಡ್ಡಲಾಗಿ 13.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಬೆಟ್ಟ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಯೋಜನೆಯ ಕಾಲಾವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 61 ಎನ್‌ಸಿಇ 2006, ಬೆಂಗಳೂರು, ದಿನಾಂಕ: 02ನೇ ಫೆಬ್ರವರಿ 2006**

ಮೆ :: ಪಿನೆಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ದೇವರಬೆಟ್ಟ ಹೊಳೆಗೆ ಅಡ್ಡಲಾಗಿ 13.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಬೆಟ್ಟ ಕಿರು ಜಲ ವಿದ್ಯುತ್ ಯೋಜನೆಯ ಕಾಲವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 273 **ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ :: ಸೌತ್ ವೆಸ್ಟ್ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಅಬಿಲ್ಬಿರು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಇಇ 148 ಎನ್‌ಸಿಇ 2003 ದಿನಾಂಕ : 22.03.2004.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಅಬಿಲ್ಬಿರು/2005/209 ದಿನಾಂಕ : 20.01.2006.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ :: ಸೌತ್ ವೆಸ್ಟ್ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಮಾರನಹಳ್ಳಿ ಗ್ರಾಮದ ಬಳಿ ಅಬಿಲ್ಬಿರು ಹಳ್ಳಕ್ಕೆ ಅಡ್ಡಲಾಗಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಯೋಜನೆಯ ಕಾಲಾವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 63 ಎನ್‌ಸಿಇ 2006, ಬೆಂಗಳೂರು, ದಿನಾಂಕ: 02ನೇ ಫೆಬ್ರವರಿ 2006**

ಮೆ :: ಸೌತ್ ವೆಸ್ಟ್ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಮಾರನಹಳ್ಳಿ ಗ್ರಾಮದ ಬಳಿ ಅಬಿಲ್ಬಿರು ಹಳ್ಳಕ್ಕೆ ಅಡ್ಡಲಾಗಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಕಾಲವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 272 **ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ENERGY SECRETARIAT**

**Subject:** Enhancement of allotted capacity of Wind Power Project (Wind Mill Project) from 2 MW to 30 MW in favour of M/s Suzlon Infrastructure limited-reg.

**Read:** 1) Government Order No : EN 315 NCE 2005, dated : 19.10.2005.
2) Letters No : KRED/08/SIL-JGM/2005/127, dated : 10.01.2006 and No: KRED/08/SIL-JGM/2006/299 dated: 6.2.2006. received from the Managing Director, Karnataka Renewable Energy Development Limited, Bangalore.

**PREAMBLE:**

In the Government order read at (1) above, the sanction has been accorded for transfer of 7.2 MW capacity Wind Power Project (Wind Mill Project) at Jogimatti and Kasavinahalli in Chitradurga District from M/s Fiza Developer and Inter Trade Private Limited to M/s Suzlon Infrastructure Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, vide his letter read at (2) above has recommended to Government to transfer 5.2 MW capacity out of sanctioned 7.2 MW to M/s Fiza Developers and Inter Trade Private Limited from M/s Suzlon Infrastructure Limited. Further, he has recommended to enhance the capacity to 30 MW from its sanctioned 2 MW (7.2MW-5.2MW=2MW) Wind Power capacity at Jogimatti in Chitradurga District to M/s Suzlon Infrastructure Limited.

The proposal has been examined at Government level and hence the following order :

**GOVERNMENT ORDER No. EN 27 NCE 2006, Bangalore, Dated: 10th February 2006**

Government is pleased to accord approval for transfer 5.2 MW capacity out of sanctioned 7.2 MW to M/s Fiza Developers and Inter Trade Private Limited from M/s Suzlon Infrastructure Limited and also accord sanction for enhance the capacity to 30 MW from its sanctioned 2 MW (7.2MW-5.2MW=2MW) Wind Power capacity (Wind Mill Project) at Jogimatti in Chitradurga District to M/s Suzlon Infrastructure Limited as detailed below:-

The details of 5.2 MW capacity and its areas transferred to M/s Fiza Developers and Inter Trade Private Limited is shown as below :-

| Sl. No. | Sanctioned Capacity | Villages | Taluk and Districts | Description of the Area |
|---|---|---|---|---|
| 1. | 2.95 MW | Jogimatti area | Chitradurga | Latitude: $14^0$ 9' 26''-$14^0$ 10' 24'' N<br>Longitude: $76^0$ 21'12''-$76^0$ 22' 8'' E<br>Ridge Peaks: North-West of 1065m Amsl |
| 2. | 2.25 MW | Kasavanahalli Holelkere Taluk | Chitradurga | About 1Km length ridge oriented in a North-West, South-East direction and is situated in the north of Kasavanahalli village.<br>Latitude: $14^0$ 4' 30''-$14^0$13' 5'' N<br>Longitude: $76^0$ 5' 16''-76' 0'' E<br>Ridge Peaks : 1054m Amsl |
| Total | 5.2 MW | | | |

The details of enhancement capacity from 2 MW to 30 MW capacity to M/s Suzlon Infrastructure Limited is as under :-

| Name of the place | Sanctioned Capacity | Description of the Area |
|---|---|---|
| Jogimatti village, Chitradurga District | 30 MW | The earmarked area has no distinct orientation and is situated in Jogimatti Forest area. The major portion of the earmarked area is having South and Southwest slopes and is covered with rocky knobs. Further, it is described as open scrub as per SOI map. The area has two peaks and is held in the following Geographical Co-ordinates:<br>Latitude: $14^0$ 8' 26''-$14^0$ 10' 10'' N<br>Longitude: $76^0$ 22' 44''-$76^0$ 24' 33'' E<br>Ridge Peaks: 1132, 906m Amsl |

The other terms and conditions of the allotment order shall continue as it is.

By Order and in the name of the Governor of Karnataka,

P.R. 242

**SURESH B. KRISHNAPPANAVAR**

Under Secretary to Government, Energy Department.

**ಇಂಧನ ಸಚಿವಾಲಯ**

**ವಿಷಯ:** ಮೆ: ಆಕಾಶ ಗಂಗಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಚಪ್ಪರಹಳ್ಳ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಂಇ 268 ಎನ್‌ಸಿಇ 2003, ದಿನಾಂಕ: 15.11.2003.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಚಪ್ಪರಹಳ್ಳ/2005/207 ದಿನಾಂಕ: 20.01.2006.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ: ಆಕಾಶ ಗಂಗಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಹೊಳೆಗಂಡಿ ಗ್ರಾಮದ ಚಪ್ಪರಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಚಪ್ಪರಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಯೋಜನೆಯ ಕಾಲಾವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 62 ಎನ್‌ಸಿಇ 2006, ಬೆಂಗಳೂರು, ದಿನಾಂಕ: 02ನೇ ಫೆಬ್ರವರಿ 2006**

ಮೆ: ಆಕಾಶ ಗಂಗಾ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಹೊಳೆಗಂಡಿ ಗ್ರಾಮದ ಚಪ್ಪರಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಚಪ್ಪರಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಕಾಲವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 274

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಪಿ.ಹೆಚ್. ಗಂಗಾಧರರಾವ್, ನಿವೃತ್ತ ಪ್ರಧಾನ ಇಂಜಿನಿಯರ್ ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿ ನೀಡುವ ಬಗ್ಗೆ.

**ಓದಲಾಗಿದೆ:**
1) ಆದೇಶ ಸಂಖ್ಯೆ ಸಿಆಸುಇ 52 ಎಸ್‌ಇಎನ್ 1999, ದಿನಾಂಕ 25.03.2003.
2) ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 1999, ದಿನಾಂಕ: 30.08.2005.
3) ಮಹಾಲೇಖಪಾಲರ ಪತ್ರ ಸಂಖ್ಯೆ PVX / R4 / R 20279 /05-06/202, ದಿನಾಂಕ 08.12.2005.
4) ಮಹಾಲೇಖಪಾಲರ ಪತ್ರ ಸಂಖ್ಯೆ GEII/P6/Vol.33/973-74, ದಿನಾಂಕ 29.12.2005.
5) ಶ್ರೀ ಪಿ.ಹೆಚ್. ಗಂಗಾಧರರಾವ್, ನಿವೃತ್ತ ಪ್ರಧಾನ ಇಂಜಿನಿಯರ್, ಇವರ ಪತ್ರ ದಿನಾಂಕ: 26.12.2005.

**ಪ್ರಸ್ತಾವನೆ:**

ಶ್ರೀ ಪಿ.ಹೆಚ್. ಗಂಗಾಧರರಾವ್, ಪ್ರಧಾನ ಇಂಜಿನಿಯರ್ ಇವರು ದಿನಾಂಕ: 30.06.2002ರಂದು ಸೇವೆಯಿಂದ ವಯೋನಿವೃತ್ತಿ ಹೊಂದಿದ್ದಾರೆ. ಅಧಿಕಾರಿಯು ನಿವೃತ್ತಿ ಹೊಂದಿದ ಸಮಯದಲ್ಲಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆಗಳು ಬಾಕಿಯಿದ್ದ ಕಾರಣ, ನಿವೃತ್ತ ಅಧಿಕಾರಿಗೆ ಕೇವಲ ತಾತ್ಕಾಲಿಕ ವಿಶ್ರಾಂತಿ ವೇತನವನ್ನು ಮಾತ್ರ ಬಿಡುಗಡೆಗೊಳಿಸಿ ಉಳಿದ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯಲಾಗಿತ್ತು. ಮೇಲೆ ಕ್ರಮ ಸಂಖ್ಯೆ (1)(2)ರಲ್ಲಿ ಓದಲಾದ ಆದೇಶದಲ್ಲಿ ನಿವೃತ್ತ ಅಧಿಕಾರಿಯ ವಿರುದ್ಧ ಬಾಕಿಯಿದ್ದ ಇಲಾಖಾ ವಿಚಾರಣೆಯಲ್ಲಿ ನಿವೃತ್ತ ಅಧಿಕಾರಿಯನ್ನು ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸಲಾಗಿದೆ. ಅದರನ್ವಯ ನಿವೃತ್ತ ಅಧಿಕಾರಿಯ ತಡೆಹಿಡಿಯಲಾದ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸುವಂತೆ ದಿನಾಂಕ: 21.11.2005 ರಂದು ಮಹಾಲೇಖಪಾಲರಿಗೆ ತಿಳಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ: (3) ಮತ್ತು (4)ರಲ್ಲಿ ಓದಲಾದ ಮಹಾಲೇಖಪಾಲರ ಪತ್ರದಲ್ಲಿ ನಿವೃತ್ತ ಅಧಿಕಾರಿಗೆ ತಡೆಹಿಡಿಯಲಾದ ನಿವೃತ್ತಿ ನಂತರದ ಗಳಿಕೆ ರಜೆ ನಗದೀಕರಣ ಬಾಬ್ತು ರೂ. 1,15,568-00 ಮತ್ತು ಉಪದಾನ ರೂ. 1,65,330-00 ಗಳನ್ನು ಬಿಡುಗಡೆಗೊಳಿಸಲಾಗಿದೆ. ಕ್ರಮಸಂಖ್ಯೆ (5)ರ ಪತ್ರದಲ್ಲಿ ನಿವೃತ್ತ ಅಧಿಕಾರಿಯು ತಮಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯಗಳಿಗೆ ದಿನಾಂಕ: 01.01.1998 ರಿಂದ ಶೇ. 18ರಂತೆ ಚಕ್ರಬಡ್ಡಿಯನ್ನು ಮತ್ತು ರೂ. 10,000-00 ದಾವೆ ಖರ್ಚನ್ನು ಮಂಜೂರು ಮಾಡುವಂತೆ ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: 159 ಸೇಇಮು 2005, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2006.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಪಿ.ಹೆಚ್. ಗಂಗಾಧರರಾವ್, ನಿವೃತ್ತ ಪ್ರಧಾನ ಇಂಜಿನಿಯರ್ ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತ ಸೌಲಭ್ಯಗಳಿಗೆ ರೂ. 2,58,418-00 (ಎರಡು ಲಕ್ಷದ ಐವತ್ತೆಂಟು ಸಾವಿರದ ನಾಲ್ಕು ನೂರ ಹದಿನೆಂಟು ರೂಪಾಯಿಗಳು ಮಾತ್ರ) ಬಡ್ಡಿಯನ್ನು ಪಾವತಿಸಲು ಈ ಕೆಳಕಂಡ ಲೆಕ್ಕಾಚಾರ ಹಾಕಿ ಮಂಜೂರಾತಿ ನೀಡಲಾಗಿದೆ.

| | |
|---|---|
| (ಅ) ಉಪದಾನ : ರೂ. 1,65,330-00 | |
| ದಿನಾಂಕ: 01.04.1998 ರಿಂದ 20.08.2003 ವರೆಗೆ ಶೇ. 12 ರಂತೆ (64 ತಿಂಗಳು 20 ದಿನಗಳು) | ರೂ. 1,06,877-88 |
| ದಿನಾಂಕ: 21.08.2003 ರಿಂದ 30.11.2005 ವರೆಗೆ ಶೇ. 8 ರಂತೆ (27 ತಿಂಗಳು 11 ದಿನಗಳು) | ರೂ. 30,150-55 |
| ಒಟ್ಟು | ರೂ. 1,37,028-43 |
| (ಆ) ನಿವೃತ್ತಿ ನಂತರದ ಗಳಿಕೆ ರಜೆ ನಗಧೀಕರಣ ರೂ. 1,15,568-00 | |
| ದಿನಾಂಕ: 01.04.1998 ರಿಂದ 20.08.2003 ವರೆಗೆ ಶೇ. 12 ರಂತೆ (64 ತಿಂಗಳು 20 ದಿನಗಳು) | ರೂ. 1,00,309-12 |
| ದಿನಾಂಕ: 21.08.2003 ರಿಂದ 30.11.2005 ವರೆಗೆ ಶೇ. 8 ರಂತೆ (27 ತಿಂಗಳು 11 ದಿನಗಳು) | ರೂ. 32,252-52 |
| ಒಟ್ಟು | ರೂ. 1,21,389-65 |

(ಅ) ರೂ. 1,37,028-43
(ಆ) ರೂ. 1,21,389-65
ರೂ. 2,58,418-08 or 2,58,418-00

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ(ವಿ) 69/06(ಎ) (ಸಿನಂ. 55716) ದಿನಾಂಕ: 18.01.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 258

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).